ಈ ಕಲ್ಲಚ್ಚಿನ ಪ್ರತಿಯನ್ನು ೧೮೭೦ರಲ್ಲಿ ಪುನರ್ಮುದ್ರಣ ಗೊಳಿಸಿದನೆಂದು ತಿಳಿದುಬರುತ್ತದೆ. ಹೊಳಕಲ್ಲು ನರಸಿಂಹಯ್ಯನವರು ಈ ಕಲ್ಲಚ್ಚು ಪ್ರತಿಯನ್ನು ಪರಿಷ್ಕರಿಸಿ ಪುನರ್ಮುದ್ರಣಕ್ಕೆ ಅಣಿಮಾಡಿಕೊಟ್ಟರು. ಇದರಲ್ಲಿ ಪುರಂದರದಾಸರ ಕೀರ್ತನೆಗಳೊಂದಿಗೆ ಇತರ ದಾಸರ ಕೀರ್ತನೆಗಳು ಸೇರಿವೆ. ಒಟ್ಟು ೧೭೩ ಕೀರ್ತನೆಗಳು ಇದರಲ್ಲಿವೆ. ಪುರಂದರದಾಸರ ಕೃತಿಗಳನ್ನೇ ಸಂಗ್ರಹಿಸಿ ಪ್ರಪ್ರಥಮವಾಗಿ ಅಚ್ಚುಮಾಡಿಸಿದವರೆಂದರೆ ಮಡಕಶಿರಾ ಬಾಲಕೃಷ್ಣರಾಯರು. ಇವರು ೧೮೯೪ರಲ್ಲಿ ಮದರಾಸಿನಿಂದ ತೆಲುಗು ಲಿಪಿಯಲ್ಲಿ ಈ ಕೃತಿ ಪ್ರಕಟಿಸಿದರು. 'ಪುರಂದರದಾಸುಲುವಾರು ಪಾಡಿನ ಕೀರ್ತನಲು' ಎಂಬುದು ಈ ಕೃತಿಯ ಹೆಸರು. ೧೮೮೦ರ ಅವಧಿಯಲ್ಲಿ ಬೆಳಗಾವಿಯಲ್ಲಿ ಅಬಾಜಿ ರಾಮಚಂದ್ರ ಸಾವಂತರು ದೇವನಾಗರಿಲಿಪಿಯಲ್ಲಿ ದಾಸರ ಪದಗಳ ಸಂಗ್ರಹವನ್ನು ಪ್ರಕಟಿಸಿದರು. ಬೆಂಗಳೂರಿನ ಟಿ. ಎನ್. ಕೃಷ್ಣಯ್ಯಶೆಟ್ಟರು ೧೯೧೪ರಲ್ಲಿ ಪುರಂದರದಾಸರ ಪದಗಳ ಸಂಗ್ರಹವನ್ನು ಪ್ರಕಟಿಸಿದರು. ಪಾವಂಜೆ ಗುರುರಾಯರು ಉಡುಪಿಯಲ್ಲಿ ಶ್ರೀ ಮನ್ಮಧ್ವಸಿದ್ಧಾಂತ ಗ್ರಂಥಾಲಯದಿಂದ ಪುರಂದರರ ಒಂದು ಸಾವಿರದ ಐವತ್ತು ಕೀರ್ತನೆಗಳನ್ನು ಐದು ಭಾಗಗಳಲ್ಲಿ ಪ್ರಕಟಿಸಿದರು. ೧೯೧೨ರಲ್ಲಿ ಈ ಪ್ರಕಟನೆ ನಡೆಯಿತು. ೧೯೩೨ರಲ್ಲಿ ಉಗಾಭೋಗಗಳನ್ನೊಳಗೊಂಡ ಕೊನೆಯಭಾಗ ಪ್ರಕಟವಾಯಿತು. ಇದೇ ರೀತಿಯಾದ ಇನ್ನೊಂದು ಸಂಗ್ರಹ ಸುಬೋಧ ರಾಮರಾಯರ ಹರಿದಾಸಕೀರ್ತನ ತರಂಗಿಣಿ ಗ್ರಂಥಮಾಲೆಯಿಂದ ೧೯೨೫ರಲ್ಲಿ ಪ್ರಾರಂಭವಾಯಿತು. ಎರಡುಭಾಗಗಳಲ್ಲಿ ಪ್ರಕಟವಾದ ಈ ಸಂಗ್ರಹದಲ್ಲಿ ಪುರಂದರದಾಸರ ಐದುನೂರಾ ನಲವತ್ತುಮೂರು ಕೀರ್ತನೆಗಳು, ಒಂದುನೂರಾ ಇಪತ್ತೆಂಟು ಉಗಾಭೋಗಗಳೂ ಸೇರಿವೆ. ಪಣಿಯಾಡಿ ಲಕ್ಷ್ಮೀನಾರಾಯಣ ಉಪಾಧ್ಯಾಯ, ವೆಂಕಟರಮಣಾಚಾರ್ಯ ಮತ್ತು ಲಕ್ಷ್ಮೀನಾರಾಯಣ ಅಡಿಗ ಈ ಮೂವರೂ ಸೇರಿ ೧೯೪೦ರಲ್ಲಿ ತುಳುನಾಡು ಪ್ರೆಸ್ಸಿನಿಂದ ಒಂದು ಸಂಕಲನವನ್ನು ತಂದರು, ಅದು ನಾಲ್ಕು ಭಾಗಗಳಲ್ಲಿ ಪ್ರಕಟವಾಯಿತು. ೧೯೪೪ರಲ್ಲಿ ರಾಯಚೂರ ಜಿಲ್ಲೆಯ ಲಿಂಗಸೂಗೂರಿನ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲದಿಂದ ಗೊರೆಬಾಳ ಹನುಮಂತರಾಯರು ಮತ್ತೊಂದು

ಸಂಕಲನವನ್ನು ತಂದರು. ೧೯೫೦ರಲ್ಲಿ ಎಸ್.ಎಸ್.ಕಾರಂತರು (ತುಳುನಾಡು ಪ್ರೆಸ್ಸಿನ ಮ್ಯಾನೇಜರ್‌ರಾಗಿದ್ದವರು) ಪುರಂದರದಾಸರ ಆರುನೂರಾ ಐವತ್ತಾರು ಪದಗಳ ಸಂಗ್ರಹವೊಂದನ್ನು ಹೊರ ತಂದರು. ಪುರಂದರ ದಾಸರ ಸಾಹಿತ್ಯದ ಸಂಗ್ರಹ-ಸಂಪಾದನೆ-ಪ್ರಕಟನೆಯ ಈ ಕಾರ್ಯ ನಿರಂತರವಾಗಿ ನಡೆಯುತ್ತಲೇ ಬಂದಿದೆ. ಪುರಂದರರ ಚತುರ್ಥ ಶತಮಾನೋತ್ಸವ ಸಂದರ್ಭದಲ್ಲಿ, ಅಂದರೆ ೧೯೬೩-೬೪ರ ಅವಧಿಯಲ್ಲಿ ಬೆಂಗಳೂರು ಧಾರವಾಡಗಳಲ್ಲಿ ಉತ್ಸವ ಸಮಿತಿಯು ಪ್ರೊ. ಎಸ್. ಕೆ. ರಾಮಚಂದ್ರ- ರಾವ್ ಅವರಿಂದ ಪುರಂದರದಾಸರನ್ನು ಕುರಿತು ಗ್ರಂಥವೊಂದನ್ನು ಬರೆಯಿಸಿ ಕನ್ನಡ, ಇಂಗ್ಲೀಷ, ತೆಲುಗು ಭಾಷೆಗಳಲ್ಲಿ ಪ್ರಕಟಿಸಿತು.

ಧಾರವಾಡದ ಉತ್ಸವ ಸಮಿತಿಯವರು, ಮಿಂಚಿನ ಬಳ್ಳಿ ಕಾರ್ಯಾಲಯದ ಬುರ್ಲಿಬಿಂದು ಮಾಧವಾಚಾರ್ಯರ ನೇತೃತ್ವದಲ್ಲಿ ಪುರಂದರದಾಸರ ಸಮಗ್ರ ಸಾಹಿತ್ಯವನ್ನು ಆರು ಸಂಪುಟಗಳಲ್ಲಿ ಹೊರತಂದರು. ಬೆಟಗೇರಿ ಕೃಷ್ಣಶರ್ಮ ಹಾಗು ಬೆಂಗೇರಿ ಹುಚ್ಚರಾಯರು ಸಂಪಾದಕರಾಗಿ ಬಹಳ ನಿಷ್ಠೆಯಿಂದ ಈ ಕಾರ್ಯವನ್ನು ಯಶಸ್ಸುಗೊಳಿಸಿದರು. ೧೯೬೩ ರಿಂದ ೧೯೬೫ ರ ಅವಧಿಯಲ್ಲಿ ಪೂಜಾತತ್ತ್ವ, ಆರ್ತಭಾವ, ಮಹತ್ಮಜ್ಞಾನ, ಕೃಷ್ಣಲೀಲೆ, ಲೋಕನೀತಿ ಮತ್ತು ಸಂಕೀರ್ಣ ಸಂಗ್ರಹ ಹೀಗೆ ಆರು ಮಹತ್ವದ ಸಂಪುಟಗಳು ಹೊರ ಬಂದವು. ಈ ಆರು ಸಂಪುಟಗಳಲ್ಲಿ ಪುರಂದರದಾಸರು ರಚಿಸಿರುವ ಒಂಬತ್ತುನೂರಾ ಒಂದು ರಚನೆಗಳು ಸಂಗ್ರಹಗೊಂಡಿವೆ.

ಈ ಸಂಪುಟಗಳು ಪುರಂದರದಾಸರ ರಚನೆಗಳನ್ನು ಬಹು ಅರ್ಥಪೂರ್ಣವಾದ ರೀತಿಯಲ್ಲಿ ಒಳಗೊಂಡಿವೆ, ಶುದ್ಧಪಾಠ, ಸಮಗ್ರ ಪರಿಶೀಲನೆ, ಸಂಪಾದನೆಯ ಶಿಸ್ತು, ಆಳವಾದ ಅಧ್ಯಯನ, ಸತತ ಪರಿಶ್ರಮ ಎಲ್ಲಾ ಸೇರಿ ಇವು ಮಹತ್ವದ ಮತ್ತು ಅಧಿಕೃತ ಆಕರಗಳಾಗುತ್ತವೆ. ಪರಿಶಿಷ್ಟದಲ್ಲಿ ಶಬ್ದಾರ್ಥ, ಅಕಾರಾದಿ, ಸಾಂದರ್ಭಿಕ ಕಥೆಗಳು ಐತಿಹಾಸಿಕ ವಿವರಣೆಗಳೂ ಸೇರಿವೆ. ಹೀಗಾಗಿ ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿಯವರ ಸಂಪಾದಕತ್ವದಲ್ಲಿ ಪ್ರಕಟವಾದ ಈ ಆರೂ ಸಂಪುಟಗಳು, ಪುರಂದರರ ಸಾಹಿತ್ಯವನ್ನು ಕುರಿತಂತೆ ಅಧಿಕೃತ ದಾಖಲೆಗಳಾಗಿವೆ.

ಪುರಂದರದಾಸರ ಐದನೆಯ ಶತಮಾನೋತ್ಸವದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದಿಂದ 'ಪುರಂದರದಾಸರ ಸಾಹಿತ್ಯ' ದರ್ಶನ ಹೆಸರಿಸಲ್ಲಿ ನಾಲ್ಕು ಸಂಪುಟಗಳು ಪ್ರಕಟವಾಗಿವೆ. ಜೀವನದರ್ಶನ, ಆಧ್ಯಾತ್ಮದರ್ಶನ, ಸಮಾಜದರ್ಶನ ಮತ್ತು ಕೀರ್ತನದರ್ಶನ ಹೆಸರಿನ ಈ ನಾಲ್ಕು ಸಂಪುಟಗಳ ಸಂಪಾದಕರು ಪ್ರೊ.ಎಸ್.ಕೆ.ರಾಮಚಂದ್ರರಾವ್, ಸಹಾಯಕ ಸಂಪಾದಕರು ಪ್ರೊ.ಅ.ರಾ.ಮಿತ್ರ ಹಾಗೂ ರತ್ನಾ ಶಿವಶಂಕರ್. ವಿಷಯಗಳಿಗನುಗುಣವಾಗಿ ಇಲ್ಲಿ ಸಂಪುಟಗಳನ್ನು ಮಾಡಿಕೊಳ್ಳಲಾಗಿದೆ ಜೀವನದರ್ಶನದಲ್ಲಿ ಪುರಂದರರ ಸಮಕಾಲೀನ ದಾಸರು ಮತ್ತು ನಂತರದ ದಾಸರ ಕೀರ್ತನೆಗಳೂ ಸೇರಿವೆ.

ಇವಲ್ಲದೆ ಇನ್ನು ಅನೇಕ ಸಂಗ್ರಹಗಳು ಬಂದಿವೆ. ಕಮಲದಾನಿ ಗುರುರಾಯರು ಪ್ರಕಟಿಸಿದ ಸಂಗ್ರಹ, ಗದಗದ ಬಿ.ಜಿ. ಸಂಕೇಶ್ವರರ ಸಂಗ್ರಹ ಹುಬ್ಬಳ್ಳಿಯ ಎ.ಎಂ.ಕರಡಿಯವರ ಸಂಗ್ರಹ ಹಾಗು ೧೯೫೦ರಲ್ಲಿ ಬೆಂಗಳೂರಿನಿಂದ ಪ್ರಕಟವಾದ ಉಪಾಧ್ಯಾಯ ಪ್ರಕಟನಾಲಯದ ಸಂಗ್ರಹಗಳನ್ನಿಲ್ಲಿ ಹೆಸರಿಸಬಹುದಾಗಿದೆ. ಇತರದಾಸರ ಆಯ್ದಪದಗಳ ಸಂಗ್ರಹಗಳು ಅನೇಕ ಇವೆ. ಅಂತಹ ಸಂಗ್ರಹಗಳಲ್ಲಿಯೂ ಪುರಂದರದಾಸರ ರಚನೆಗಳು ಸೇರಿಕೊಂಡಿವೆ.

## ಕೃತಜ್ಞತೆಗಳು

ಬೆಟಗೇರಿ ಕೃಷ್ಣಶರ್ಮ ಹಾಗು ಬೆಂಗೇರಿ ಹುಚ್ಚುರಾಯರು ಸಂಪಾದಿಸಿದ ಆರು ಸಂಪುಟಗಳನ್ನು ಅಧಿಕೃತ ಸಂಪುಟಗಳೆಂದು ಪರಿಗಣಿಸಿ ಅವುಗಳನ್ನೇ ಇಲ್ಲಿ ಮುಖ್ಯ ಆಕರವಾಗಿ ಬಳಸಲಾಗಿದೆ. ಕನ್ನಡ ಸಂಸ್ಕೃತಿ ನಿರ್ದೇಶನಾಲಯವು, ಪ್ರೊ.ಎಸ್.ಕೆ.ರಾಮಚಂದ್ರರಾವ್ ಅವರ ಸಂಪಾದಕತ್ವದಲ್ಲಿ ಪ್ರಕಟಿಸಿದ ಪುರಂದರದಾಸರ ಸಾಹಿತ್ಯವನ್ನೊಳಗೊಂಡ ನಾಲ್ಕೂ ಸಂಪುಟಗಳನ್ನು ಪಾಠಾಂತರ, ಪರಿಷ್ಕರಣೆಯ ಸಂದರ್ಭದಲ್ಲಿ ಬಳಸಿಕೊಳ್ಳಲಾಗಿದೆ. ಈ ಎರಡು ಸಂಗ್ರಹಗಳಲ್ಲಿ ಪ್ರಕಾಟವಾಗಿರುವ ಕೆಲವು ಪೂರ್ವಕತೆ ಮತ್ತು ಟಿಪ್ಪಣಿಗಳನ್ನು ಇಲ್ಲಿ ಬಳಸಲಾಗಿದೆ. ಹೀಗಾಗಿ ಈ ಎರಡೂ ಸಂಗ್ರಹಗಳ ಸಂಪಾದಕರುಗಳಿಗೆ ಕೃತಜ್ಞತೆಗಳು.

ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಪುರಂದರದಾಸರ ಕೀರ್ತನೆಗಳ ಓಲೆಗರಿಗಳ ವಿವರಗಳನ್ನು ಡಾ.ಟಿ.ಎನ್.ನಾಗರತ್ನ ಅವರು ಒದಗಿಸಿದ್ದಾರೆ. ಪಾಠಾಂತರ ನಿರ್ಣಯಿಸುವಲ್ಲಿ, ಪುರಂದರ-ಕನಕದಾಸರ ಅಂಕಿತ ಬದಲಾವಣೆಯಿಂದಾದ ತೊಂದರೆಯನ್ನು ಹೋಗಲಾಡಿಸುವಲ್ಲಿ ಈ ವಿವರಗಳು ಪ್ರಮುಖ ದಾಖಲೆಗಳಾಗಿವೆ ಅದಕ್ಕಾಗಿ ಅವರಿಗೂ ಧನ್ಯವಾದಗಳು.

ಕೆಲವು ಕೀರ್ತನೆಗಳು ಪುರಂದರದಾಸರ ಅಂಕೀತದಲ್ಲೂ ಇವೆ. ಕನಕದಾಸರ ಅಂಕಿತದಲ್ಲೂ ಇವೆ. ಈ ಕುರಿತು ಸಂಪಾದಕ ಸಮಿತಿಯು ಸಾದ್ಯಂತವಾಗಿ ಚರ್ಚಿಸಿ, "ವಿವಾದಾಸ್ಪದ ಕೀರ್ತನೆಗಳನ್ನು ಪುರಂದರದಾಸ, ಕನಕದಾಸ ಇವೆರಡೂ ಸಂಪುಟಗಳಲ್ಲಿ ಸೇರಿಸಬೇಕು ಹಾಗೂ 'ಇಂತಹ ಕೀರ್ತನೆಯು ಪುರಂದರ/ ಕನಕ ದಾಸರ ಅಂಕಿತದಲ್ಲಿಯೂ ಇದೆ' ಎಂದು ಅಡಿಟಪ್ಪಣಿಯಲ್ಲಿ ಕಾಣಿಸಬೇಕು ಎಂಬುದಾಗಿ ನಿರ್ಣಯಿಸಿತು. ಅದರಂತೆ ಈ ಸಂಪುಟದಲ್ಲಿ ಸೇರ್ಪಡೆ ಮಾಡಿ ಹಾಗೂ ಅಡಿಟಿಪ್ಪಣಿಗಳಲ್ಲಿ ಹಾಗೆ ಬರೆಯಲಾಗಿದೆ.

ಈ ಸಂಪುಟವನ್ನು ನಾನು ಸಂಪಾದಿಸಿಕೊಡಲು ಡಾ.ಟಿ.ಎನ್.ನಾಗರತ್ನ ಅವರ ಸಲಹೆ-ಸಹಕಾರವಿದೆ. ಅವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಸಮಗ್ರ ದಾಸವಾಙ್ಮಯ ಪ್ರಕಟನಾ ಸಮಿತಿಯ ಎಲ್ಲ ಸದಸ್ಯರಿಗೂ, ಸಂಸ್ಕೃತಿ ಇಲಾಖೆಯ ಹಿಂದಿನ ನಿರ್ದೇಶಕರಾದ ಶ್ರೀ ಸಿ. ಸೋಮಶೇಖರ್ ಹಾಗೂ ಇಂದಿನ ನಿರ್ದೇಶಕರಾಗಿರುವ ಶ್ರೀ ವೈ.ಕೆ.ಮುದ್ದುಕೃಷ್ಣ , ಅವರಿಗೂ ಅಭಿವಂದನೆಗಳು.

ಈ ಸಂಪುಟದ ಹಸ್ತಪ್ರತಿ ಸಿದ್ಧಪಡಿಸುವಲ್ಲಿ ನನ್ನ ಸಂಶೋಧನಾ ವಿದ್ಯಾರ್ಥಿಗಳು ಸಹಕರಿಸಿದ್ದಾರೆ. ಶ್ರೀಮತಿ ರಾಜಶ್ರೀ ಕಲ್ಲೂರಕರ್, ಕು.ಸುವರ್ಣ ವರ್ಝಿ, ಕು.ಸ್ನೇಹಲತಾ, ಭಾರತಿ, ದಸ್ತಗಿರಿಸಾಬ್ ದಿನ್ನಿ, ಮುನಿಯಪ್ಪ, ಡಿ.ಆರ್.ಜಿ.ಕುಲಕರ್ಣಿ, ಮಹೇಶಕುಮಾರ, ಅನಿಲಕುಮಾರ, ಹಿರೇಮಠ, ವೈಜಿನಾಥ ಇವರೆಲ್ಲರಿಗೂ ನನ್ನ ನೆನೆಕೆಗಳು. ಇಲ್ಲಿಯ ಕೀರ್ತನೆಗಳ ಅಕಾರಾದಿ ಸಿದ್ಧಪಡಿಸುವಲ್ಲಿ ಸಹಕರಿಸಿದ ಡಾ. ಜಯಲಕ್ಷ್ಮಿ ಮಂಗಳಮೂರ್ತಿ ಹಾಗು ಶ್ರೀಮತಿ

ಶೀಲಾದಾಸ ಅವರಗೆ ಕೃತಜ್ಞತೆಗಳು. ನಮ್ಮ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ನನ್ನ ಸಹೋದ್ಯೋಗಿಗಳನ್ನು ಹಾಗು ಸಂಗಾತಿ ವಿಜಯಶ್ರೀಯನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇನೆ. ಬೆಂಗಳೂರಿನ ವಿಜಯ ಕಾಲೇಜಿನ ಅಧ್ಯಾಪಕ ಶ್ರೀ ಎಸ್.ಎಲ್, ಶ್ರೀನಿವಾಸಮೂರ್ತಿಯವರ ಸಹಾಯವನ್ನೂ ಇಲ್ಲಿ ನೆನೆಯುತ್ತೇನೆ. ಡಾ. ಶ್ರೀನಿವಾಸ ಹಾವನೂರ ಅವರಿಗೆ ಧನ್ಯವಾದಗಳು. ಈ ಸಂಪುಟ ಸಿದ್ಧಪಡಿಸುವಲ್ಲಿ ಪ್ರತ್ಯಕ್ಷವಾಗಿ ಹಾಗು ಪರೋಕ್ಷವಾಗಿ ಸಹಾಯ-ಸಹಕಾರ ನೀಡಿದ ಎಲ್ಲರಿಗೂ ಕೃತಜ್ಞತೆಗಳನ್ನು ಸಲ್ಲುತ್ತವೆ.

ಈ ಸಂಪುಟದಲ್ಲಿ ಪ್ರಕಟವಾಗಿರುವ ಕೀರ್ತನೆಗಳ ಪಾಠಾಂತರ ನಿರ್ಣಯಿಸುವಲ್ಲಿ, ಮುದ್ರಿಕೆಗಳ ಸ್ಪಷ್ಟೀಕರಣದ ವಿಷಯದಲ್ಲಿ ದಾಸ ಸಾಹಿತ್ಯ ಸಂಶೋಧಕರ ಸಲಹೆಗಳಿಗೆ ಸ್ವಾಗತವಿದೆ. ಓದುಗರ ಅಭಿಪ್ರಾಯಗಳನ್ನು, ಪ್ರತಿಕ್ರಿಯೆಗಳನ್ನು ಮುಕ್ತ ಹೃದಯದಿಂದ ಸ್ವಾಗತಿಸುತ್ತೇನೆ.

–ಡಾ. ಬಸವರಾಜ ಸಬರದ

# ಕೀರ್ತನೆಗಳ ಕ್ರಮಸೂಚಿ

# ಅನುಬಂಧಗಳು

೧. ಕಠಿಣ ಶಬ್ದಗಳ ಅರ್ಥ

೨. ಪಾರಿಭಾಷಿಕ ಪದಗಳ ಅರ್ಥ

೩. ಟಿಪ್ಪಣಿಗಳು

೪. ಕೀರ್ತನೆಗಳ ಅಕಾರಾದಿ

೫. ಸಹಾಯಕ ಸಾಹಿತ್ಯ

# ಅನುಬಂಧ-೧

## ಕಠಿಣ ಶಬ್ದಗಳ ಅರ್ಥ

### ಅ

ಅರ್ಕ – ಸೂರ್ಯ

ಅಕ್ಕಸ – ಮಾರೆ

ಅಕುಟಿಲ – ಸತ್ಯಮಾರ್ಗವನ್ನನು–ಸರಿಸು

ಅಖಿಳ – ಇಡಿಯಾದ

ಅಗ್ರೋದಕ – ಮೀಸಲು ನೀರು

ಅಗಣಿತ – ಎಣಿಕೆಗೆ ಮೀರಿದುದು

ಅಚ್ಯುತ – ಚ್ಯುತಿ ಇಲ್ಲದವ

ಅಜ – ಬ್ರಹ್ಮ

ಅಣುಗು – ಪ್ರೀತಿ

ಅದ್ವೈತ – ಅಚ್ಯುತಮತ

ಅಧೋಕ್ಷಜ – ಕೃಷ್ಣ , ವಿಷ್ಣು

ಅನುಜ – ತಮ್ಮ

ಅಪರೋಕ್ಷ – ಪ್ರತ್ಯಕ್ಷ

ಅಬ್ಧಿ – ಸಮುದ್ರ

ಅಭೀಷ್ಟ – ಬಯಸಿದುದು

ಅರವಿಂದಾಸನ– ಬ್ರಹ್ಮ

ಅರುಣಪಲ್ಲವ – ಕೆಂಪುಚಿಗುರು

ಅಲವ ಬೋರ– (ಅ+ಲವ) ಪೂರ್ಣಭೋಧ

ಅಕ್ಷಯ – ಅರವತ್ತು ಸಂವತ್ಸರಗಳಲ್ಲಿ ಒಂದು

ಅವನಿ – ಭೂಮಿ

ಅಂಗಜಪಿತ – ಕಾಮನ ತಂದೆ

ಅಂಡಜ – ಬ್ರಹ್ಮ

ಅಂಘ್ರು – ಕಾಲು, ಹೆಜ್ಜೆ

ಅಂದುಗೆ – ನೂಪುರ

ಅಂಧಕ – ಕುರುಡ

ಅಂಬು – ನೀರು

ಅಂಬುಜಾ – ಲಕ್ಷ್ಮೀ

ಅಂಬುಜಾಕ್ಷ – ವಿಷ್ಣು

ಅಂಬುಜಾಸನ – ಬ್ರಹ್ಮ

ಅಂಬು – ಗಂಗಾನದಿ

### ಆ

ಆರೋಗಪಿಸು – ಸೇವಿಸು

ಆಪೋಶನ – ಊಟಕ್ಕೆ ಮೊದಲು, ಊಟದ ನಂತರ ಅಂಗೈಯ ನೀರನ್ನು ಹೀರುವುದು ಮತ್ತು ಹಾಗೆ ಹೀರುವ ನೀರು

### ಇ

ಇನ – ಸೂರ್ಯ

ಇಭರಾಜಗಮನೆ– ಗಜಗಮನೆ

## ಗಣೇಶ ಪ್ರಾರ್ಥನೆ

### ೧

ಗಜವದನ ಬೇಡುವೆ ಗೌರೀತನಯ
ತ್ರಿಜಗವಂದಿತನೆ ಸುಜನರ ಪೊರೆವನೆ ಪ

ಪಾಶಾಂಕುಶ ಧರ ಪರಮ ಪವಿತ್ರ ।
ಮೂಷಕವಾಹನ ಮುನಿಜನ ಪ್ರೇಮ ೧

ಮೋದದಿಂದಲಿ ನಿನ್ನ ಪಾದವ ನಂಬಿದೆ ।
ಸಾಧುವಂದಿತನೆ ಅನಾದರ ಮಾಡದೆ ೨

ಸರಸಿಜನಾಭ ಶ್ರೀ ಪುರಂದರ ವಿಠಲನ ।
ನಿರುತ ನೆನೆಯುವಂತೆ ವರ ದಯ ಮಾಡೊ ೩

### ೨

ವಂದಿಸುವುದಾದಿಯಲಿ ಗಣನಾಥನ ಪ

ಸಂದೇಹ ಸಲ್ಲ ಶ್ರೀಹರಿಯಾಜ್ಞೆಯಿದಕುಂಟು ಅ.ಪ

ಹಿಂದೆ ರಾವಣ ತಾನು ವಂದಿಸದೆ ಗಜಮುಖನ
ನಿಂದು ತಪವನು ಗೈದು ವರ ಪಡೆಯಲು
ಒಂದು ನಿಮಿಷದಿ ಬಂದು ವಿಘ್ನವನು ಆಚರಿಸಿ
ತಂದ ವರಗಳನೆಲ್ಲ ಧರೆಗೆ ಇಳಿಸಿದನು ೧

ಅಂದಿನಾ ಬಗೆಯರಿತು ಬಂದು ಹರಿ ಧರ್ಮಜಗೆ
ಮುಂದೆ ಗಣಪನ ಪೂಜಿಸೆಂದು ಪೇಳೆ

ಒಂದೆ ಮನದಲಿ ಬಂದು ಪೂಜಿಸಲು ಗಣನಾಥ
ಹೊಂದಿಸಿದ ನಿರ್ವಿಘ್ನದಿಂದ ರಾಜ್ಯವನು ೨

ಇಂದು ಜಗವೆಲ್ಲ ಉಮೆನಂದನನ ಪೂಜಿಸಲು
ಚೆಂದದಿಂದಲಿ ಸಕಲಸಿದ್ಧಿಗಳನಿತ್ತು
ತಂದೆ ಸಿರಿ ಪುರಂದರವಿಠಲನ ಸೇವೆಯೊಳು
ಬಂದು ವಿಘ್ನವ ಕಳೆದಾನಂದವನು ಕೊಡುವ ೩

## ೩

ಶರಣು ಶರಣು ಪ

ಶರಣು ಬೆನಕನೆ ಕನಕ ರೂಪನೆ ಕಾಮಿನಿ ಸಂಗ ದೂರನೆ ।
ಶರಣು ಸಾಂಬನ ಪ್ರೀತಿ ಪುತ್ರನೆ ಶರಣು ಜನರಿಗೆ ಮಿತ್ರನೆ ಅ.ಪ

ಏಕದಂತನೆ ಲೋಕಖ್ಯಾತನೆ ಏಕವಾಕ್ಯ ಪ್ರವೀಣನೆ
ಏಕವಿಂಶತಿ ಪತ್ರ ಪೂಜಿತಾನೇಕ ವಿಘ್ನ ವಿನಾಯಕನೆ ೧

ಲಂಬಕರ್ಣನೆ ನಾಸಿಕಾಧರನೆ ಗಾಂಭೀರ್ಯ  ಶಿವಗುಣ ಸಾಗರನೆ
ಕಂಬುಕಂಧರ ಇಂದು ಮೌಳಿಜ ಚಂದನ ಚರ್ಚಿತಾಂಗನೆ ॥ ೨

ಚತುರ್ಬಾಹು ಚರಣತೊರವಿನ ಚತುರ ಆಯುಧ ಧಾರನೆ
ಮತಿಯವಂತನೆ ಮಲಿನಜನಿತನೆ ಅತಿಯ ಮಧುರಾಹಾರನೆ ॥ ೩

ವಕ್ರತುಂಡನೆ ಮಹಾಕಾಯನೆ ಅರ್ಕಕೋಟಿ ಪ್ರದೀಪನೆ
ಚಕ್ರಧರ ಹರಬ್ರಹ್ಮ ಪೂಜಿತ ರಕ್ತವಸ್ತ್ರಾಧಾರನೆ ॥ ೪

ಮೂಷಿಕಾಸನ ಶೇಷಭೂಷಣ ಅಶೇಷ ವಿಘ್ನವಿನಾಯಕನೆ
ದಾಸ ಪುರಂದರ ವಿಟ್ಠಲೇಶನ ಈಶಗುಣಗಳ ಪೊಗಳುವೆ ॥ ೫

## ೪

ಶರಣು ಶರಣು ವಿನಾಯಕ
ಶರಣು ವಿದ್ಯಾ ಪ್ರದಾಯಕ ಪ

ಶರಣು ಪಾರ್ವತಿ ತನಯ ಮೂರುತಿ
ಶರಣು ಮೂಷಕ ವಾಹನ ಅ.ಪ

ನಿಟಿಲ ನೇತ್ರನ ವರದ ಸುತನೆ ನಾಗ ಯಜ್ಞೋಪವೀತನೆ
ಕಟಿಯ ಸೂತ್ರದ ಕೋಮಲಾಂಗನೆ ಕರ್ಣಕುಂಡಲಧಾರನೆ ೧

ಬಟ್ಟಮುತ್ತಿನ ಪದಕ ಹಾರನೆ ದಿವ್ಯಬಾಹು ಚತುಷ್ಕನೆ
ಇಟ್ಟ ತೊಡುಗೆಯ ಹೇಮ ಕಂಕಣ ಪಾಶ–ಅಂಕುಶಧಾರನೆ ೨

ಕುಕ್ಷಿ ಮಹಾ ಲಂಬೋದರನೆ ಇಕ್ಷುಚಾಪನ ಗೆಲಿದನೆ
ಪಕ್ಷಿ ವಾಹನನಾದ ಪುರಂದರ ವಿಠಲನ ನಿಜದಾಸನೆ ೩

## ಶ್ರೀ ಹರಿ ಸಂಕೀರ್ತನೆ

### ೫

ಅಚ್ಯುತಾನಂತ ಗೋವಿಂದ–ಹರಿ ।
ಸಚ್ಚಿದಾನಂದ ಸ್ವರೂಪ ಮುಕುಂದ ಪ

ಕೇಶವ ಕೃಷ್ಣ ಮುಕುಂದ–ಹರಿ ।
ವಾಸುದೇವ ಗುರು ಜಗದಾದಿವಂದ್ಯ ॥
ಯಶೋದೆಯ ಸುಕೃತದ ಕಂದ–ನಮ್ಮ ॥
ಶೇಷಶಯನ ಭಕ್ತ ಹೃದಯಾನಂದ ೧

ನಾರಾಯಣ ನಿನ್ನ ನಾಮ–ಎನ್ನ ।
ನಾಲಿಗೆಯೊಳಗಿರಬೇಕೆಂಬ ನೇಮ ॥
ನಾನು ಬೇಡುವೆ ನಿನ್ನ ಪ್ರೇಮ–ಎನ್ನ ॥
ಪಯಣ ಸಮಯಕೊದಗಲಿ ಗುಣಧಾಮ ೨

ಮಾಧವ ಮಂಗಳಗಾತ್ರ–ಸ್ವಾಮಿ ।
ಯಾದವ ಕೈಲಾಸವಾಸನ–ಮಿತ್ರ ॥
ಮಹಿಮೆ ಕೇಳಿದರೆ ವಿಚಿತ್ರ–ಎನ್ನ ॥
ಮನಮೆಚ್ಚಲಿ ಸತ್ಯಭಾಮಾಕಳತ್ರ ೩

ಗೋವಿಂದ ಗೋಪಾಲ ಬಾಲ–ಸೋಳ ।
ಸಾವಿರ ಗೋಪಿಯರ ಆನಂದಲೀಲಾ ॥
ಜೀವಮಣಿಯ ಮುಕ್ತಾಮಾಲಾ–ನಿನ್ನ ॥
ನೇನೆಂದು ಕರೆಯಲಿ ಸುಗ್ರೀವಪಾಲ ೪

ವಿಷ್ಣುಚಕ್ರವು ಬಂದು ಸುತ್ತಿ–ಮೂರು ।
ಸೃಷ್ಟಿಯನೆಲ್ಲವ ತಿರುಗಿ ಬೆನ್ನಟ್ಟಿ ॥
ಕೃಷ್ಣ ಸಲಹೆಂದು ಮೊರೆಯಿಟ್ಟ–ಮುನಿ ॥
ಶ್ರೇಷ್ಠಗಿಷ್ಟರ ಮೇಲೆ ಅಭಯವ ಕೊಟ್ಟೆ ೫

ಮಧುಸೂದನ ಮಾರಜನಕ–ನೀನು ।
ಮದಗಜ ಸೀಳಿ ಮಲ್ಲರ ಗೆಲಿದೆ ತವಕ ॥
ಒದಗಿ ಕಂಸನ ಕೊಂದ ಬಳಿಕ–ನೀ ॥
ಮುದುಕಗೆ ಪಟ್ಟವ ಕಟ್ಟಿದೆ ಧನಿಕ ೬

ತ್ರಿವಿಕ್ರಮ ತ್ರೈಲೋಕ್ಯನಾಥ–ದೇವ ।
ತ್ರಿಪುರರ ಸತಿಯರ ವ್ರತಕೆ ವಿಘಾತ ॥
ಯದುವಂಶ ಪಾಂಡವ ಪ್ರೀತ–ಎನ್ನ ॥
ಹೃದಯದೊಳಡಗಿರೊ ಶ್ರೀ ಜಗನ್ನಾಥ ೭

ವಾಮನರೂಪದಿ ಬಂದು–ಬಲಿಯ ।
ದಾನವ ಬೇಡಲು ಉಚಿತವು ಎಂದು ॥
ಧಾರೆಯನೆರೆಯಲು ಅಂದು–ಬೆಳೆದು ॥
ಧಾರಿಣಿಯೆಲ್ಲವನಳೆದೆ ನೀನಂದು ೮

ಶ್ರೀಧರ ಶೃಂಗಾರಾಧಾರ–ದಿವ್ಯ ।
ಶ್ರೀವತ್ಸಲಾಂಛನ ಶ್ರೀರಘುವೀರ ॥
ವಾರಿಧಿಸಮ ಗಂಭೀರ–ಗೈದೆ ।
ಕ್ರೂರರಕ್ಕಸರನೆಲ್ಲರ ಸಂಹಾರ ೯

ಹೃಷೀಕೇಶ ವೃಂದಾವನದಲಿ–ನೀ ।
ನಿಶೆಯಲಿ ಕೊಳಲನೂದುತ ಇರಲಿಲ್ಲ ॥
ಋಷಿವೃಂದವಂದ್ಯ ನಿನ್ನಗಲಿ–ನಿ ।
ಮಿಷವು ಬಿಟ್ಟಿರಲಾರೆ ನಿಲ್ಲೋ ಮನದಲಿ ೧೦

ಪದ್ಮನಾಭನೆ ಕೇಳೊ ಮುನ್ನ–ಎನ್ನ ।
ಸುದ್ದಿಯನೆಲ್ಲವ ಉಸಿರುವೆ ಘನ್ನ ॥
ಅದ್ವೈತರೂಪ ಪ್ರಸನ್ನ–ಸ್ವಾಮಿ ।
ಇದ್ದ ಠಾವಿಗೆ ಕರೆದೊಯ್ಯೊ ನೀನೆನ್ನ ೧೧

ದಾಮೋದರ ದನುಜಹರಣ–ಹರಿ ।
ರಾಮಚಂದ್ರನೆ ರಘುಕುಲ ಸಾರ್ವಭೌಮ ॥
ಸ್ವಾಮಿ ನೀಲ ಮೇಘಶ್ಯಾಮ–ದೇವ ।
ಭೂಮಿಜಾಪತಿಯೆಂಬ ಬಹುಪುಣ್ಯನಾಮ ೧೨

ಸಂಕರ್ಷಣ ಸರುವಾಭರಣ–ಇಟ್ಟು ।
ಪಂಕಜಮುಖಿ ದ್ರೌಪದಿ ಮೇಲೆ ಕರುಣ ॥
ಕುಂಕುಮಾಂಕಿತ ನೀಲಕಿರಣ–ರತ್ನ ।
ಕಂಕಣಭೂಷಣ ಕೌಸ್ತುಕಾಭರಣ ೧೩

ವಾಸುದೇವ ಕೇಳೊ ನಿನ್ನ–ದಿವ್ಯ ।
ಸಾಸಿರನಾಮವ ನೆನೆವನೆ ಧನ್ಯ ॥
ಬೇಸರದೆ ಸಲಹಬೇಕೆನ್ನ–ಸ್ವಲ್ಪ ।
ಗಾಸಿಯ ಮಾಡದೆ ಕರುಣ ಸಂಪನ್ನ ೧೪

ಪ್ರದ್ಯುಮ್ನ ನೀನೆಂದು ಕರೆಯೆ–ದುರ್ ।
ಬುದ್ಧಿಯನೆಲ್ಲವ ನನ್ನಿಂದ ಮರೆಯೆ ॥
ಇದ್ದ ದುರ್ವಿಷಯವ ತೊರೆಯೆ–ಸಾಧು ।
ಸಜ್ಜನ ಸಂಗನೆ ನಿನ್ನೊಳು ಬೆರೆಯೆ ೧೫

ಅನಿರುದ್ಧ ಗೋಕುಲದಲ್ಲಿ–ನೀ
ಅನುದಿನ ಇರಲು ಗೋಪಿಯರ ಮನೆಯಲಿ ॥
ಸನಕಾದಿವಂದ್ಯ ನಿನ್ನಗಲಿ–ಒಂದು ।
ಕ್ಷಣವೂ ಬಿಟ್ಟಿರಲಾರೆ ನಿಲ್ಲೋ ಮನದಲಿ ೧೬

ಪುರುಷೋತ್ತಮಗಾರು ಸಾಟಿ?–ಶ್ರೀ ।
ಪರಬ್ರಹ್ಮಸ್ವರೂಪ ನಿನಗಾರು ಧಾಟಿ? ॥
ನಿರವದ್ಯ ಭಕ್ತಿ ಕಿರೀಟ–ನಿನ್ನ ।
ಶರೀರದೊಳಗೆ ಕಂಡು ಬ್ರಹ್ಮಾಂಡ ಕೋಟಿ ೧೭

ಅಧೋಕ್ಷಜ ಅಸುರಸಂಹಾರಿ–ದೇವ ।
ಅದುಭುತ ರೂಪನೆ ಶಿಶುಪಾಲ ವೈರಿ ॥

ಭಜಕರ ಪಾಲಿಪ ಶೌರಿ–ನೀ ।
ಅಜಮಿಳ ಕರೆದರೆ ಕಾಯ್ದೆ ಮುರಾರಿ ೧೮

ನರಸಿಂಹರೂಪವ ತಾಳಿ–ಬಂದೆ ।
ಕರೆಯೆ ಕಂಬದಿ ಕಂದನ ಮಾತಕೇಳಿ ॥
ದುರುಳ ರಕ್ಕಸನನು ಸೀಳಿ–ನಿನ್ನ ।
ಕೊರಳಲಿ ಧರಿಸಿದೆ ಕರುಳಿನ ಮಾಲಿ ೧೯

ಅಚ್ಯುತ ನೀನಲೆ ಮುದ್ದು–ಗೋಪಿ ।
ಬಚ್ಚಿಟ್ಟ ಹಾಲು–ಮೊಸರು–ಬೆಣ್ಣೆ ಮೆದ್ದು ॥
ತುಚ್ಛ ಶಕಟನ ಕಾಲಿಲೊದ್ದು–ಕರು ।
ಬಿಚ್ಚಿ ಓಡಿದೆ ಚೋರಕಂಡಿಯಲಿ ಕದ್ದು ೨೦

ಜನಾರ್ದನ ಕೇಳೊ ಬಿನ್ನಪವ–ನೀ ।
ತೊಲಗಿಸು ಬಂದೆನ್ನ ಮನದ ಕಲುಷವ ॥
ಹೊರಲಾರೆ ಭೂ ಭಾರತನುವ–ನಿನ್ನ ।
ಸ್ಮರಣೆ ಇದ್ದವ ಮುಕ್ತಿಪಥವನೆ ಗೆಲುವ ೨೧

ಉಪೇಂದ್ರನುರಗನ ತುಳಿಯೆ–ಆಗ ।
ಅಪರಿಮಿತ ವಿಷದ ಮಡುವು ಕಲಕಿ ಉಳಿಯೆ ॥
ತ್ರಿಪುರರಕ್ಕಸರನು ಗೆಲಿಯೆ–ನಿನ್ನ ।
ಚಪಲತನವ ನೋಡಿ ಸುರರೆಲ್ಲ ಬೆರೆಯೆ ೨೨

ಹರಿಹರಿ ಎಂದರೆ ಪಾಪ–ರಾಶಿ ।
ಹರಿದು ಹೋಗುವದು ಮನದ ಸಂತಾಪ ॥
ಸರುವರೊಳಗೆ ವಿಶ್ವರೂಪ–ನಿನ್ನ ।
ನೆರೆನಂಬಿದವರನು ಸಲಹು ಪ್ರತಾಪ ೨೩

ಕೃಷ್ಣ ಕೃಷ್ಣನೆಂಬ ಸೊಲ್ಲ–ಕೇಳಿ ।
ನಷ್ಟವಾಗಿ ಹೋಯ್ತು ಪಾತಕವೆಲ್ಲ ॥
ಮುಟ್ಟಿ ಭಜಿಸಿರಿ ಜನರೆಲ್ಲ, ಪುರಂದರ ।
ವಿಠಲನಲ್ಲದೆ ಪರದೈವವಿಲ್ಲ ೨೪

೬

ಆವಪರಿಯಲಿ ನಿನ್ನನೊಲಿಸಿ ಮೆಚ್ಚಿಪ ವಿಧವು ।
ಅಣು ಮಾತ್ರ ತೋರದಲ್ಲ ಪ

ದೇವ ದೇವೇಶ ನೀನೆಂದು ನಂಬಿರಲು
ಕೃಪಾವಲೋಕನದಿ ಸಲಹೊ–ದೇವ ಅ.ಪ

ಫಣಿರಾಜನಾಸನದಿ ಮಲಗಿದವಗೆ
ಅರಿವೆಯಾಸನವೆಂತು ನಾ ಹಾಸಲಿ ।
ಘನವಾದ ಗಂಗೆಯನು ಪಡೆದವಗೆ ಕಲಶ
ನೀರನದೆಂತು ಮೈಗೆರೆಯಲಿ ॥
ತನುವಿನಾ ಪರಿಮಳವು ಘಮಘಮಿಪನಿಗೆ
ಸುಚಂದನವೆಂತು ನಾ ಪೂಸಲಿ ।
ಅನವರತ ನಾಭಿಯೊಳು ಶತಪತ್ರವಿಹಗೆ
ಮಿಕ್ಕಿನ ಪೂವ ಮುಡಿಸಲೆಂತೈ–ದೇವ ೧

ಸುರುಚಿರೋಜ್ವಲ ಪೀತವಾಸನಿಗೆ ಉಡುಗೊರೆಯ
ಅರಿವೆ ಏನನು ಪೊದಿಸಲಿ?
ವರ ಕೌಸ್ತುಭವು ಕೊರಳಿನೊಳಗೆ ಇಪ್ಪವಗೆ
ಆಭರಣವಾವುದ ತೊಡಿಸಲಿ?
ತರಣಿಶತ ಕೋಟಿ ತೇಜನ ಮುಂದೆ ಹೇಗೆ ನಾ
ಪೆರತೊಂದು ದೀಪವಿಡಲಿ?
ನೆರಹಿದಾ ಫಣಿಪತಿಯ ಸ್ತೋತ್ರದೂರನ
ನಾನು ಸ್ಮರಿಪೆನಂತಯ್ಯ ದೇವ, ದೇವ ೨

ವನಜಜಾಂಡದ ಕೋಟಿಯುದರಂಗೆ ಆವುದನು
ಉಣಿಸಿ ತೃಪ್ತಿಯ ಮಾಡಲಿ? ।

ಅನಿಮಿಷರಿಗಮೃತವನ್ನೆರೆದವನ ತೃಷೆಯ
ನೀರಿನೊಳೆಂತು ಸಂತವಿಡಲಿ? ॥
ವಿನತೆಯಾತ್ಮಜಪಕ್ಷದನಿಲನಿರೆ ಬೇರೆ
ಬೀಸಣಿಗೆಯಿನ್ನೇಂ ಬೀಸಲಿ ।
ಅಣುರೇಣು ಪರಿಪೂರ್ಣ ಮೂರುತಿಗೆ
ನಾ ಪ್ರದಕ್ಷಿಣೆಯೆಂತು ಸುತ್ತಿ ಬರಲಿ–ದೇವ ೩

ಮಿಗೆ ಫಣಿಯ ಫಣದಾತಪತ್ರ ವಿರುವವಗೆ
ನೆರಳಿಗೆ ಕೊಡೆಯನೇಂ ಪಿಡಿಯಲಿ ।
ಪಗಲಿರುಳು ಸಾಮಗಾನಪ್ರಿಯನ ಮುಂದೆ
ಗೀತಗಳ ನಾನೇಂ ಪಾಡಲಿ ॥
ಜಗವರಿಯೆ ಲಕ್ಷ್ಮಿದೇವಿಪತಿಗೆ ಎಷ್ಟು ಹೊನ್ನುಗಳ
ದಕ್ಷಿಣೆಯ ಕೊಡಲಿ ।
ನಿಗಮ ತತಿ ಕಾಣದ ಮಹಾಮಹಿಮನನು
ನಮಿಪ ಬಗೆಯ ನಾನರಿವೆನೆಂತೈ–ದೇವ ೪

ಒಲಿಸುವುದನರಿಯೆ ಮೆಚ್ಚಿಸುವ ಬಗೆಯನರಿಯೆ
ಹೊಗಳುವ ಹೊಲಬನ್ನರಿಯೆನು ।
ತಿಳಿದುದಿಲ್ಲವು ಷೋಡಶೋಪಚಾರದ
ಪೂಜೆಗಳಲೊಂದುಪರಿಯಾದರೂ ॥
ನೆಲೆಯ ಕಾಣೆನು ನಿಗಮ ಶಾಸ್ತ್ರ ನವವಿಧ
ಭಕ್ತಿಯೊಳಗೊಂದು ಬಗೆಯಾದರೂ ॥
ಅಳಿಲು ಸೇವೆಯನೊಪ್ಪಿಕೊಂಡು ಸಲಹೈ
ಪುರಂದರ ವಿಠಲನೇ ಸ್ವಾಮಿ–ಪ್ರೇಮಿ ೫

## ೭

ಈ ಪರಿಯ ಸೊಬಗಾವ ದೇವರಲಿ ನಾ ಕಾಣೆ
ಗೋಪೀಜನ ಪ್ರಿಯ ಗೋಪಾಲಗಲ್ಲದೆ ಪ

ದೊರೆಯತನದಲಿ ನೋಡೆ ಧರಣಿದೇವಿಯ ರಮಣ
ಸಿರಿಯತನದಲಿ ನೋಡೆ ಶ್ರೀಕಾಂತನು ॥
ಹಿರಿಯತನದಲಿ ನೋಡೆ ಸರಸಿಜೋದ್ಭವನಯ್ಯ
ಗುರುವುತನದಲಿ ನೋಡೆ ಜಗದಾದಿ ಗುರುವು ೧

ಪಾವನತ್ವದಿ ನೋಡೆ ಅಮರ ಗಂಗಾಜನಕ
ದೇವತ್ವದಲಿ ನೋಡೆ ದಿವಿಜರೊಡೆಯ ॥
ಲಾವಣ್ಯದಲಿ ನೋಡೆ ಲೋಕಮೋಹಕನಯ್ಯ
ಆವ ಧೈರ್ಯದಿ ನೋಡೆ ಅಸುರಾಂತಕ ೨

ಗಗನದಲಿ ಸಂಚರಿಪ ಗರುಡದೇವನೆ ತುರಗ
ಜಗತೀಧರ ಶೇಷ ಪರಿಯಂಕ ಶಯನ ॥
ನಿಗಮಗೋಚರ ಪುರಂದರ ವಿಠಲಗಲ್ಲದೆ
ಮಿಗಿಲಾದ ದೈವಗಳಿಗೀ ಭಾಗ್ಯವುಂಟೇ * ೩

## ೮

ಎನಗೊಬ್ಬ ದೊರೆ ದೊರಕಿದನು।
ವನಜಸಂಭವನಯ್ಯ ಹನುಮನಂತರ್ಯಾಮಿ ಪ

ಮಾತಾಪಿತನು ಆದ ಭ್ರಾತೃ ಬಾಂಧವನಾದ ।
ಪ್ರೀತಿಯಿಂದಲಿ ತಾನೇ ನಾಥನಾದ ॥
ಖ್ಯಾತನು ತಾನಾದ ದಾತನು ತಾನಾದ ।
ಭೂತೇಶ ವಂದ್ಯ ವಿಭೂತಿಪ್ರದನಾದ ೧

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ಅಜರಾಮರನಾದ ಅಪ್ರಾಕೃತನಾದ ।
ವಿಜಯಗೊಲಿದು ನಿಜ ಸೂತನಾದ ॥
ಭುಜಗಶಯನನಾದ ತ್ರಿಜಗವಂದಿತನಾದ ।
ಅಜಮಿಳನಂತ್ಯಕತ್ಯಂತ ಸುಹೃದನಾದ ೨

ಶಂಖ ಚಕ್ರಾಂಕಿತದ ಸಂಕರುಷಣನಾದ ।
ಬಿಂಕದ ಬಿರುದುಗಳ ಪೊತ್ತವನಾದ ॥
ಪಂಕಜನಯ್ಯನ ಮೀನಾಂಕ ಜನಕನಾದ ।
ಓಂಕಾರ ಮೂರುತಿ ಪುರಂದರ ವಿಠಲನು ೩

## ೬

ಏತರ ಚೆಲುವ-ರಂಗಯ್ಯ ಪ

ಏತರ ಚೆಲುವ ರಂಗಯ್ಯ ಶ್ರೀಹರಿಯೆಂಬ ।
ಮಾತಿಗೆ ಬರಿದೆ ಮರುಳಾದೆನಲ್ಲದೆ ಅ.ಪ

ದೇಶವಾಸಗಳುಳ್ಳೊಡೆ-ತಾ ಕ್ಷೀರವಾ ।
ರಾಶಿಯೊಳಗೆ ಮನೆ ಕಟ್ಟುವನೆ? ॥
ಹಾಸುವ ಮಂಚವುಳ್ಳೊಡೆ-ಶ್ರುತಿಹೀನ ।
ಶೇಷನ ಮೇಲೆ ಮಲಗುವನೆ? ೧

ಹಡೆದ ತಾಯಿ ತನಗುಳ್ಳೊಡೆ-ರಂಗ ।
ಹೊಡೆದು ಕರು-ತುರುಗೊಂಡು ಬಾಳುವನೆ? ॥
ಮಡದಿಯರುಳ್ಳೊಡೆ ಅಡವಿಯೊಳಾಡುವ ।
ಹುಡುಗಿಯರ ಸಂಗ ಮಾಡುವನೆ? ೨

ಬುದ್ಧಿ ಪೇಳುವ ಪಿತನುಳ್ಳೊಡೆ-ರಂಗ ।
ಕದ್ದು ಬೆಣ್ಣೆ ದಧಿ ಮೆಲ್ಲುವನೆ ? ॥
ನಿರ್ಧಾರ ವಾಹನವುಳ್ಳೊಡೆ-ಹಾರುವ ।
ಹದ್ದಿನ ಹೆಗಲೇರಿ ಬಾಹನೆ?-ರಂಗ ೩

ಸಿರಿಯುಳ್ಳೊಡೆ ತಾನು ಬಲಿಯ ಮನೆಗೆ ಪೋಗಿ ।
ಧರೆಯ ದಾನಕ್ಕೆ ಕೈಯನೊಡ್ಡುವನೆ? ॥
ಗರುವ ತಾನಾದರೆ ಪಾಂಡುಕುಮಾರನ ।
ಧುರದ ಬಂಡಿಯ ಬೋವನಾಗುವನೆ? ೪

ಮದನಜನಕ ನಿಜ್ಜ ಚೆಲುವನೆಂತೆಂಬೆನೆ ।
ಮದದಿಂದ ಕುಬ್ಜೆಯ ಕೂಡುವನೆ? ॥
ಪದುಮನಾಭ ಸಿರಿ ಪುರಂದರವಿಠಲ ।
ಗದುಗಿನ ವೀರನಾರಾಯಣ–ರಂಗ ೫

## ೧೦

ಏಳು ನಾರಾಯಣ ಏಳು ಲಕ್ಷ್ಮೀರಮಣ
ಏಳು ಶ್ರೀಗಿರಿಯೊಡೆಯ ಶ್ರೀವೆಂಕಟೇಶ ಪ

ಕಾಸಿದ್ದ ಹಾಲನ್ನು ಕಾವಡಿಯೊಳ್ ಹೆಪ್ಪಿಟ್ಟು
ಲೇಸಾಗಿ ಕಡೆದು ಹೊಸ ಬೆಣ್ಣೆ ಕೊಡುವೆ
ಶೇಷಶಯನನೆ ಏಳು ಸಮುದ್ರ ಮಥನವ ಮಾಡು
ದೇಶ ಕೆಂಪಾಯಿತು ಏಳಯ್ಯ ಹರಿಯೇ ೧

ಅರುಳು ಮಲ್ಲಿಗೆ ಜಾಜಿ ಪರಿಮಳದ ಪುಷ್ಪಗಳ
ಸುರರು ತಂದಿದ್ದಾರೆ ಬಲು ಭಕುತಿಯಿಂದ
ಅರವಿಂದನಾಭ ಸಿರಿವಿಧಿಭವಾದಿಗಳೊಡೆಯ
ಪಿರಿದಾಗಿ ಕೋಳಿ ಕೂಗಿತೇಳಯ್ಯ ಹರಿಯೇ ೨

ದಾಸರೆಲ್ಲರು ಬಂದು ಧೂಳಿದರ್ಶನಕೊಂಡು
ಲೇಸಾಗಿ ತಾಳ ದಂಡಿಗೆಯ ಪಿಡಿದು
ಶ್ರೀಶ ಪುರಂದರ ವಿಠಲರಾಯ ನಿಮ್ಮ ಪಾದವನು
ಲೇಸಾಗಿ ಪೊಗಳುವರು ಹರಿಯೇ * ೩

* ಈ ಕೀರ್ತನೆ ಕನಕದಾಸರ ಅಂಕಿತದಲ್ಲೂ ದೊರೆಯುತ್ತದೆ

## ೧೧

ಒಂದೇ ನಾಮವು ಸಾಲದೆ – ಶ್ರೀಹರಿಯೆಂಬ
ಒಂದೇ ನಾಮವು ಸಾಲದೆ ಪ

ಒಂದೇ ನಾಮವು ಭವಬಂಧನ ಬಿಡಿಸುವು ।
ದೆಂದು ವೇದಂಗಳಾನಂದದಿ ಸ್ತುತಿಸುವ ಅ.ಪ

ಉಭಯರಾಯರು ಸೇರಿ ಮುದದಿ ಲೆತ್ತವನಾಡಿ ।
ಸಭೆಯೊಳು ಧರ್ಮಜ ಸತಿಯ ಸೋಲೆ ॥
ನಭಕೆ ಕೈಯೆತ್ತಿ ದ್ರೌಪದಿ ಕೃಷ್ಣಾ ಎನ್ನಲು ।
ಇಭರಾಜಗ ಮನೆಗಕ್ಷಯವಸ್ತ್ರವನಿತ್ತ ೧

ಹಿಂದೊಬ್ಬ ಋಷಿಪುತ್ರನಂದು ದಾಸಿಯ ಕೂಡೆ ।
ಸಂದೇಹವಿಲ್ಲದೆ ಹಲವು ಕಾಲ ॥
ದಂದುಗದೊಳು ಸಿಲುಕಿ ನಿಂದಂತ್ಯ ಕಾಲದಿ ।
ಕಂದನಾರಗನೆಂದು ಕರೆಯಲಭಯವಿತ್ತ ೨

ಕಾಶಿಯ ಪುರದೊಳು ಈಶ ಭಕುತಿಯಿಂದ ।
ಸಾಸಿರನಾಮದ ರಾಮನೆಂಬ ॥
ಶ್ರೀಶನನಾಮದ ಉಪದೇಶ ಸತಿಗಿತ್ತ ।
ವಾಸುದೇವ ಶ್ರೀಪುರಂದರ ವಿಠಲನ ೩

## ೧೨

ಒಲ್ಲನೋ ಹರಿ ಕೊಳ್ಳನೋ ಪ

ಎಲ್ಲ ಸಾಧನವಿದ್ದು ತುಲಸಿ ಇಲ್ಲದ ಪೂಜೆ ಅ.ಪ

ಸಿಂಧು ಸಾಗರ ಕೋಟಿ ಗಂಗೋದಕವಿದ್ದು
ಗಂಧ ಸುಪರಿಮಳ ವಸ್ತ್ರವಿದ್ದು ॥
ಅಂದವಾದಾಭರಣ ಧೂಪ–ದೀಪಗಳಿದ್ದು
ವೃಂದಾವನ ಶ್ರೀ ತುಲಸಿಯಿಲ್ಲದ ಪೂಜೆ ೧

ಮಧುಕ್ಷೀರ ಮೊದಲಾದ ಪಂಚಾಮೃತಗಳಿದ್ದು
ಮಧುಪರ್ಕ ಪೂಜೋಪಚಾರವಿದ್ದು ॥
ಮಧುಸೂದನ ಮುದ್ದು ಕೃಷ್ಣನ ಪೂಜೆಗೆ
ಮುದದ ಮೋಹದಳೆಂಬ ತುಲಸಿಯಿಲ್ಲದ ಪೂಜೆ ೨

ಕಮಲ ಮಲ್ಲಿಗೆ ಜಾಜಿ ಸಂಪಿಗೆ–ಕೇದಿಗೆ
ವಿಮಲ ಘಂಟೆ ಪಂಚವಾದ್ಯವಿದ್ದು ॥
ಅಮಲ ಪಂಚ ದಿವ್ಯ ಅಮೃತಾನ್ನಗಳಿದ್ದು
ಕಮಲನಾಭನು ಶ್ರೀ ತುಲಸಿಯಿಲ್ಲದ ಪೂಜೆ ೩

ಮಂತ್ರ ಮಹಾಮಂತ್ರ ಪುರುಷಸೂಕ್ತಗಳಿದ್ದು
ತಂತು ತಪ್ಪದ ತಂತ್ರಸಾರವಿದ್ದು ॥
ಸಂತತ ಸುಖ ಸಂಪೂರ್ಣನ ಪೂಜೆಗ
ತ್ಯಂತ ಪ್ರಿಯಳಾದ ತುಲಸಿಯಿಲ್ಲದ ಪೂಜೆ ೪

ಪೂಜೆಯ ಮಾಡದೆ ತುಲಸೀ ಮಂಜರಿಯಿಂದ
ಮೂಜಗದೊಡೆಯ ಮುರಾರಿಯನು ॥
ರಾಜಧಿರಾಜನೆಂಬ ಬಿರುದು ಮಂತ್ರಗಳಿಂದ
ಪೂಜೆ ಮಾಡಿದರೇನು ಪುರಂದರ ವಿಠಲನ ೫

## ೧೩

ಗಂಗಾದಿತೀರ್ಥ ಫಲಂಗಳ ನೀವುದು– ಹರಿಯ ನಾಮ ।
ಹಿಂಗದೆ ಜನರಿಗೆ ಮಂಗಳವೀವುದು– ಹರಿಯ ನಾಮ ಪ

ವೇದಶಾಸ್ತ್ರಂಗಳ ಅರಿಯದ ಜನರಿಗೆ– ಹರಿಯ ನಾಮ ಜಗ ।
ದಾದಿಪುರುಷನನು ಪೂಜಿಸಿದವರಿಗೆ– ಹರಿಯ ನಾಮ ॥
ಸಾಧಿಸುವೆವು ಪರವೆಂಬಂಥ ಜನರಿಗೆ– ಹರಿಯ ನಾಮ ।
ಶೋಧಿಸಿ ಇಟ್ಟ ಚಿನ್ನದ ಗಟ್ಟಿ ಕಾಣಿರೊ– ಹರಿಯ ನಾಮ ೧

ಸ್ನಾನ ಜಪಂಗಳ ಸಾಧಿಸಿದವರಿಗೆ– ಹರಿಯ ನಾಮ ।
ದಾನಧರ್ಮಕೆ ಒದಗದ ಮನುಜರಿಗೆ– ಹರಿಯ ನಾಮ ॥
ಧ್ಯಾನವೊಂದರಿಯದ ಮೂಢಾತ್ಮ ಜನರಿಗೆ – ಹರಿಯ ನಾಮ ।
ಮನುಷ್ಯ ಜನ್ಮವ ಪಾವನ ಮಾಡುವುದು – ಹರಿಯ ನಾಮ ೨

ವೇಳೆವೇಳೆಗೆ ವೆಚ್ಚ–ವ್ಯಯಗಳ ನೀವುದು– ಹರಿಯ ನಾಮ ।
ಜಾಳಿಗೆ ಮಾಳಿಗೆ ಮನೆಯ ನೆಚ್ಚದೆ ಪೇಳಿ– ಹರಿಯ ನಾಮ ॥
ಕಾಲನವರು ಬಂದು ಕದಲಲಾಗದ ಮುನ್ನ– ಹರಿಯ ನಾಮ ।
ಶ್ರೀಲೋಲ ಪುರಂದರವಿಠಲನ ಒಲುಮೆಗೆ– ಹರಿಯ ನಾಮ ೩

## ೧೪

ತಾಳಬೇಕು – ತಕ್ಕ – ಮೇಳಬೇಕು – ಶ್ರೀ ।
ಲೋಲನ ಚರಿತೆಯ ಹೇಳುವ ದಾಸರಿಗೆ ಪ

ಗಳಶುದ್ಧಿ ಇರಬೇಕು । ತಿಳಿದು ಪೇಳಲು ಬೇಕು ।
ಕಳವಳಬಿಡಬೇಕು ಕಳೆಮೊಗವಿರಬೇಕು ೧

ಯತಿ ಪ್ರಾಸವಿರಬೇಕು । ಗತಿಗೆ ನಿಲ್ಲಿಸಬೇಕು ॥
ಶ್ರುತಿಪತಿ ಕೇಳಬೇಕು । ರತಮುಖವಿರಬೇಕು ೨

ಹರಿದಾಸನಾಗಿರಬೇಕು । ಹರುಷ ಪಡುತಿರಬೇಕು ।
ಪುರಂದರವಿಠಲನಲಿ । ಸ್ಥಿರಚಿತ್ತವಿರಬೇಕು ೩

## ೧೫

ದಾತ ಹರಿಯು ದಯ ಮಾಡುವನಿರಲು
ಏತರ ಭಯವೋ ಹೇ ಮನುಜಾ ಪ

ಬೆಳಗು ಬೈಗು ಮೈ ಹುಳುಕು ಹರತೆಯಲಿ ।
ಕೆಲವು ಕಾಲದಲಿ ಗಳಿಗೆಯಾದರೂ ॥

– – – – – – – – – – – – –
– – – – – – – – – – – – – * ೧

ಸಂಸಾರದ ಸುಖಪ್ರಾಶನ ಮಾಡದೆ ।
ಕಂಸಾರಿಯ ಪದಪಾಂಸುಗಳ ಭಜಿಸು ॥
– – – – – – – – – – – – –
– – – – – – – – – – – – – * ೨

ನೀರಬೊಬ್ಬಳಿಯಂತೆ ನಿತ್ಯವಲ್ಲದ ದೇಹ ।
ಘೋರ ಸಂಸಾರದಿ ತೊಳಲದಿರು ॥
ಶ್ರೀರಮಣ ಪುರಂದರವಿಠಲ ಪರನೆಂದು ।
ಸಾರಿದೆಯಲ್ಲವೆ ಸುಮ್ಮನಿರಬೇಡ ೩

## ೧೬

ನಡೆದು ಬಾ ನಾಲ್ವರಿದ್ದೆಡೆಗೆ ಎನ್ನಯ ನಿನ್ನ
ತೊಡರ ನಿರ್ಣಯಿಸಿಕೊಂಬೆನು ತೋಯಜಾಕ್ಷ ಪ

ಆದಿಯಲ್ಲಿ ಎನ್ನ ತಾತ ಮುತ್ತಾತರು
ಪಾದ ಸೇವೆಯ ಮಾಡಿ । ಹಲವು ಕಾಲ ॥
ಸಾಧಿಸಿದರ್ಥವ ಸಲೆ ಎನ್ನ ಜೀವಕ್ಕೆ
ಆಧಾರವಾದುದನು ಏಕೆ ಕೊಡಲೊಲ್ಲೆ ೧

ಸಾಲವ ಕೇಳಲು ಸಟೆ ಟೌಳಿಯನಾಡಿ
ಕಾಲವ ಕಳೆವೆ ನೀ ಕಪಟದಿಂದ ॥
ಮೇಲಿನ ವಿಬುಧರು ಮೆಚ್ಚುವಂತೆ ನಿನ್ನ
ಕಾಲಿಗೆ ಎನ್ನ ಕೊರಳ ಕಟ್ಟಿಕೊಳ್ಳುವೆ ೨

---

* ೧–೨ನೆಯ ನುಡಿಗಳ ಉತ್ತರಾರ್ಧ ಸಿಕ್ಕಿಲ್ಲ.

ಸನಕಾದಿ ಮುನಿಗಳ ಸಾಕ್ಷಿಯಿಂದಲಿ ಎನ್ನ
ಮನಕೆ ಬಪ್ಪಂತೆ ನೀ ಘನ ನಂಬುಗೆಯಿತ್ತೆ
ಅನುಮಾನವೇಕೆ ದಯೆಪಾಲಿಸೈ ಈಗ
ವನಜಾಕ್ಷ ತಂದೆ ಪುರಂದರವಿಠಲ ೩

## ೧೭

ನಾರಿರನ್ನೆಯ ಕಂಡೆಯಾ ಪ

ವಾರಿಜನಾಭ ದೇವರದೇವ ಸುಗುಣ ಬೇ
ಲೂರ ಚೆನ್ನಿಗರಾಯನ ಎನ್ನಪ್ರಿಯನ ಅ.ಪ

ಹೊಸಬಗೆ ಮಾಟದ ಹೊಳೆವ ಕಿರೀಟದ ।
ಎಸೆವ ಮಾಣಿಕದೋಲೆಯ ॥
ಶಶಿಕಾಂತಕಧಿಕವೆಂದೆನಿಪ ಮೂಗುತಿಯಿಟ್ಟ ।
ಬಿಸಜಾಕ್ಷ ಚನ್ನಿಗರಾಯನ ಎನ್ನ ಪ್ರಿಯನ ೧

ತಿದ್ದಿದ ಕಸ್ತೂರಿ ತಿಲಕದಿಂದೊಪ್ಪುವ ।
ಮುದ್ದು ಮೊಗದ ಸೊಂಪಿನ ॥
ಹೊದ್ದಿದ ಕುಂಕುಮ ರೇಖೆ ಪೀತಾಂಬರ ।
ಪೊದೆದ ಚೆನ್ನಿಗರಾಯನ ಎನ್ನ ಪ್ರಿಯನ ೨

ಮಘಮಘಿಸುವ ಜಾಜಿ ಮಲ್ಲಿಗೆ ಸಂಪಿಗೆ ।
ಬಗೆಬಗೆ ಪೂಮಾಲೆಯ ॥
ಅಗರು ಚಂದನ ಗಂಧದನುಲೇಪವ ಗೈದ ।
ಜಗವ ಮೋಹಿಪ ಚೆನ್ನನ ಎನ್ನ ಪ್ರಿಯನ ೩

ದನುಜರಗಂಡನೆಂದೆನಿಪ ಪೆಂಡೆಯವಿಟ್ಟು ।
ಮಿನುಗುವ ಪೊಂಗೆಜ್ಜೆಯ ॥
ಘನ ಶಂಖ ಚಕ್ರ ಗದಾಂಕಿತನಾದನ ।
ಅನುಪಮ ಚೆನ್ನಿಗರಾಯನ ಎನ್ನ ಪ್ರಿಯನ ೪

ಲೀಲೆಯಿಂದಲಿ ಬಂದು ಮೇಲಾಪುರದಿ ನಿಂತ ।
ಪಾಲುಗಡಲ ಶಾಯಿಯಾದನ ॥
ಪಾಲಕ ಇಂದು ಶ್ರೀ ಪುರಂದರವಿಠಲ ।
ಬೇಲೂರ ಚೆನ್ನಿಗರಾಯನ ಎನ್ನ ಪ್ರಿಯನ ೫

## ೧೮

ನಿನಗಾರು ಸರಿಯಿಲ್ಲ ಎನಗನ್ಯ ಗತಿಯಿಲ್ಲ
ಎನಗೂ ನಿನಗೂ ನ್ಯಾಯ ಹೇಳುವರಿಲ್ಲ ಪ

ಒಂದೇ ಗೂಡಿನೊಳು ಒಂದು ಕ್ಷಣವಗಲದೆ
ಎಂದೆಂದು ನಿನ್ನ ಪಾದ ಪೊಂದಿರುವೆ ॥
ಬಂದ ವಿಷಯಂಗಳಿಗೆ ಎನ್ನನೊಪ್ಪಿಸಿಕೊಟ್ಟು
ಅಂಧಕನಂತೆ ನೀ ನೋಡುವುದುಚಿತವೆ ೧

ಪರಸತಿಗಳುಪಿರೆ ಪರಮ ಪಾಪಿಷ್ಠನೆಂದು
ಪರಿಪರಿ ನರಕವ ನೇಮಿಸುವೆ ॥
ಪರಸತಿಯರ ಒಲುಮೆ ನಿನಗೆ ಒಪ್ಪಿತು ದೇವ
ದೊರೆತನಕಂಜಿ ನಾ ಶರಣೆಂದೆನಲ್ಲದೆ ೨

ನಿನ್ನಾಜ್ಞೆಯವ ನಾನು ನಿನ್ನ ಪ್ರೇರಣೆಯಿಂದ
ಅನಂತವಿಧದ ಕರ್ಮವ ಮಾಡಿದೆ ॥
ಎನ್ನಪರಾಧಗಳೆಣಿಸಲಾಗದು ದೇವ
ಪನ್ನಗ ಶಯನ ಶ್ರೀಪುರಂದರ ವಿಠಲ ೩

## ೧೯

ನಿನ್ನ ನಾಮವೆ ಎನಗೆ ಅಮೃತಾನ್ನವು ।
ಇನ್ನು ಹಸಿದಿರಲೇಕೆ ಎನಗೆ ನೀನೊಲಿದಿರಲು ಪ

ಓಂಕಾರವೆಂಬ ನಾಮ ಉಪ್ಪು – ಉಪ್ಪಿನಕಾಯಿ ।
ಶಂಖಪಾಣಿಯ ನಾಮ ಪಾಕಾದಿ ಸೂಪ ॥
ಸಂಕರ್ಷಣನ ನಾಮ ದಿವ್ಯ ಶಾಲ್ಯನ್ನವು ।
ಪಂಕಜಾಕ್ಷನ ನಾಮ ಪಳಿದೆ ಬಗೆಬಗೆ ಸಾರು ೧

ಕೇಶವನೆಂಬ ನಾಮ ಕರಿದ ಹೂರಣಗಡಬು ।
ವಾಸುದೇವನ ನಾಮ ವಡೆ – ಸೇವಿಗೆ ॥
ಸಾಸಿರದ ನಾಮಗಳು ಸವಿಸವಿಯ ಪರಮಾನ್ನ ।
ದೋಷದೂರನ ನಾಮ ದೋಸೆ – ಸೂಸಲಗಡಬು ೨

ನಾರಾಯಣನ ನಾಮ ನೊರೆಹಾಲು ಸಕ್ಕರೆ ।
ಶ್ರೀರಾಮ ನಾಮ ಸರವಳಿ ಸಜ್ಜಿಗೆ ॥
ಕಾರುಣ್ಯನಿಧಿ ನಾಮ ಕರಿದ ಹಪ್ಪಳ – ಸಂಡಿಗೆ ।
ಪಾರಾಯಣನ ನಾಮ ಪರಿಪರಿಯ ಪಕ್ವಾನ್ನ ೩

ಯದುಪತಿಯೆಂಬ ನಾಮ ಎಣ್ಣೂರಿಗೆಯ ರಾಶಿ ।
ಮಧುಸೂದನನ ನಾಮ ಮಧುರ ಮಂಡಿಗೆಯು ॥
ಚದುರಗೋವಳ ನಾಮ ಚೆಲುವ ಬೀಸೂರಿಗೆ ।
ಪದುಮನಾಭನ ನಾಮ ಪರಿಪರಿಯ ಭಕ್ಷ್ಯ ೪

ದೇವಕೀಸುತನ ನಾಮ ದಧ್ಯನ್ನದಾ ಮುದ್ದೆ ।
ಗೋವಿಂದನ ನಾಮ ಗುಳ್ಳೋರಿಗೆ ॥
ಮಾವಮರ್ದನನ ನಾಮ ಕಲಸುಮೇಲೋಗರ ।
ರಾವಣಾರಿಯ ನಾಮ ಇಡ್ಡಲಿಗೆ – ಸುಖಿಯುಂಡೆ ೫

ಗರುಡವಾಹನನ ನಾಮ ಘೃತಪಯೋದಧಿತಕ್ರ ।
ಪರಮಪುರುಷನ ನಾಮ ಪನ್ನೀರ ಪಾನ ॥
ಕರಿವರದ ನಿನ್ನ ನಾಮ ಕರ್ಪುರದ ವೀಳ್ಯವು ।
ಶರಧಿಶಯನನ ನಾಮ ಶಯನಪರ್ಯಂಕ ೬

ಈ ಪರಿಯ ನಾಮಾವಳಿಯನು ಸವಿದುಂಡು ।
ಆಪತ್ತು ಬಿಡಿಸೆನ್ನ ಕ್ಷುಧೆಯ ನೂಕಿ ॥
ಗೋಪಾಲ ಉರಗಾದ್ರಿ ಪುರಂದರವಿಠಲನ ।
ಶ್ರೀಪಾದವನೆ ನಂಬಿ ಅಪವರ್ಗ ಸೇರುವ ೭

## ೨೦

ಪಾವನನವ ಪಾವನನವ ಪಾವನನವ ಜಗಕೆ ।
ದೇವ ಶ್ರೀಹರಿಯ ಪಾದವು ಸೋಕಿದರೆ ಪ

ಹರಿಯ ನೆನೆಯೆ ನಾಲಗೆ ಪಾವನ, ಸಿರಿ
ಮುದ್ರೆಯು ಭುಜಕೆ ಪಾವನ ।
ಉರದಿ ನಾಭಿಗೆ ನಾಮವನಿಡೆ ಪಾವನವೊ ॥
ಕೊರಳೊಳು ಶ್ರೀ ತುಳಸೀಮಣಿ ನಳಿನಾಕ್ಷವು ಇರೆ ಪಾವನ ।
ಪರಮ ವೈಷ್ಣವರಿಗೆರಗಿದ ಶಿರ ಪಾವನವೊ ೧

ತುಲಸಿ ಹಿಡಿಯೆ ಕೈ ಪಾವನ, ದಲವನಿಡೆ ಕಿವಿ ಪಾವನ ।
ಸ್ಥಲದ ಮೃತ್ತಿಕೆ ಇಡಲು ಆ ಪಣೆ ಪಾವನವೊ ॥
ಬಳಲದೆ ವೃಂದಾವನವನು ಬಳಸಿ ಬಂದವ ಪಾವನನು ।
ತುಲಸಿತೀರ್ಥವ ಕೊಂಡಾತನು ಪಾವನನಯ್ಯ ೨

ಏಕಾದಶಿಯ ವ್ರತ ಪಾವನ ಎಲ್ಲವ ತೊರೆದವ ಪಾವನ ।
ನಾಕು ಜಾವದಿ ಜಾಗರವಿರೆ ಪಾವನವೊ ॥
ಕಾಕು ನುಡಿಯದೆ ಕಾಮಿತಪ್ರದನೆಂಬ ಶ್ರೀಕಾಂತನ ಪಾದವ ।
ಏಕಾಂತದಿ ನೆನೆವನು ಪಾವನನೊ ೩

[ಕೃತಿರಮಣನ ಕಥೆಯನೊಪ್ಪಿ] ಕೇಳಿದ ಕಿವಿ ಪಾವನ ।
ಶತವೃಂದಾರಕರ ತಲೆಯ ನೆಲೆ ಪಾವನವೊ ॥
ಮತಿ ಬೇಡಿದ ಅಜ ಪಾವನ ಯತಿ ಪಾವನ ವೈಷ್ಣವರ ।
ಮತವಿಡಿದೋದಿದ ರಾಮನ ಕಥೆ ಪಾವನವೊ ೪

ಸಾಮವೇದ ಪಾವನವು – ಭೂಮಿಪತಿ ನೀ ಪಾವನ ।
ನಾಮಧಾರಿಯು ಪಾವನ ನಾರಾಯಣನ ॥
ತಾಮಸವಿಲ್ಲದೆ ಹರಿ ಸರ್ವೋತ್ತಮನೆಂಬ ।
ಸೀಮೆಯು ಪಾವನ ಪುರಂದರವಿಠಲನ ೫

## ೨೧

ಭಕುತ ಜನ ಮುಂದೆ ನೀನವರ ಹಿಂದೆ – ಇದಕೆ ।
ಯುಕುತಿ ಕೈಕೊಳದಯ್ಯ ಗಯಾಗದಾಧರನೆ ಪ

ಕಟ್ಟೆರಡು ಕೂಡಿ ತಾ ನದಿಸೂಸಿ ಹರಿವಾಗ ।
ಕಟ್ಟುಕ್ಕಿದಾಗ ಹರಿಗೋಲ ಹಾಕೆ ॥
ನೆಟ್ಟನೆ ಜಿಗಿಜಿಗಿದು ದಾಟಿ ತಾ ಪೋಪಾಗ ।
ಹುಟ್ಟು ಮುಂದಲ್ಲದಲೆ ಹರಿಗೋಲು ಮುಂದೆ? ೧

ಕಾಳೆ ಹೆಗ್ಗಾಳೆ ದುಂದುಭಿ ನಾನಾ ವಾದ್ಯದಿಂ ।
ಓಲಗದಿಂದ್ಯೆದೆ ಅರಸು ತಾ ಬರುವಾಗ ॥
ಸಾಲಾಗಿ ಬಳಿವಿಡಿದು ಸಂಭ್ರಮದಿ ಇರುವಾಗ ।
ಆಳು ಮುಂದಲ್ಲದೆ ಅರಸು ತಾ ಮುಂದೆ ? ೨

ಉತ್ಸವ ಮೂರುತಿಯು ಬೀದಿ ಮೆರೆಯುತ ಬರಲು ।
ಸತ್ಸಂಗತಿಗೆ ಹರಿದಾಸರೆಲ್ಲ ॥
ಅಚ್ಚ ಸಿರಿಯರಸು ಸಿರಿಪುರಂದರ ವಿಠಲನೆ ।
ವತ್ಸ ಮುಂದಲ್ಲದೆ ಧೇನು ತಾ ಮುಂದೆ? * ೩

* ಈ ಕೀರ್ತನೆ ವಿಜಯದಾಸರ ಅಂಕಿತದಲ್ಲೂ ಇದೆ.

## ೨೨

ರಾಮ ಎನ್ನುವ ಎರಡು ಅಕ್ಷರದ ಮಹಿಮೆಯನು ।
ಪಾಮರರು ತಾವೇನ ಬಲ್ಲರಯ್ಯ ಪ

ರಾಯೆಂದ ಮಾತ್ರದೊಳು ರಕ್ತ ಮಾಂಸದೊಳಿದ್ದ
ಆಯಸ್ಥಿಗತವಾದ ಅತಿಪಾಪವನ್ನು
ಮಾಯವನು ಮಾಡಿ ಮಹಾರಾಯ ಮುಕ್ತಿಯ ಕೊಡುವ
ದಾಯವನು ವಾಲ್ಮೀಕಿ ಮುನಿರಾಯ ಬಲ್ಲ ೧

ಮತ್ತೆ ಮ ಎಂದೆನಲು ಹೊರಬಿದ್ದ ಪಾಪಗಳು
ಒತ್ತಿ ಒಳ ಪೊಗದಂತೆಯೆ ಕವಾಟವಾಗಿ
ಚಿತ್ತ ಕಾಯಗಳ ಸುಪವಿತ್ರ ಮಾಡುವ ಪರಿಯ
ಭಕ್ತವರ ಹನುಮಂತ ತಾನೊಬ್ಬ ಬಲ್ಲ ೨

ಧರೆಯೊಳೀ ನಾಮಕ್ಕೆ ಸರಿಮಿಗಿಲು ಇಲ್ಲೆಂದು
ಪರಮ ವೇದಗಳೆಲ್ಲ ಪೊಗಳುತಿಹವು
ಸಿರಿಯರಸ ಶ್ರೀಪುರಂದರ ವಿಠಲ ರಾಮನನು
ವರ ಕಾಶಿಯೊಳಗಿಪ್ಪ ಶಿವನು ತಾ ಬಲ್ಲ ೩

## ೨೩

ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆ ।
ನಾಮವಿಠಲ ತುಪ್ಪ ಬೆರೆಸಿ ಬಾಯಿ ಚಪ್ಪರಿಸಿರೊ ಪ

ಒಮ್ಮನ ಗೋದಿಯ ತಂದು । ವೈರಾಗ್ಯ ಕಲ್ಲಲಿ ಬೀಸಿ ।
ಸುಮ್ಮನ ಸಜ್ಜಿಗೆ ತೆಗೆದು । ಸಣ್ಣ ಸೇವಿಗೆ ಹೊಸೆದು ೧

ಹೃದಯವೆಂಬ ಪಾತ್ರೆಯೊಳಗೆ । ಮನವೆಂಬ ಎಸರನಿಟ್ಟು ।
ಬುದ್ಧಿಯಿಂದ ಪಾಕ ಮಾಡಿ । ಹರಿವಾಣ ತುಂಬಿರೋ ೨

ಆನಂದ ಆನಂದವೆಂಬ ತೇಗು ಬಂದ ಪರಿಯಲಿ ।
ಆನಂದ ಮೂರುತಿ ನಮ್ಮ ಪುರಂದರವಿಠಲ ೩

## ೨೪

ರಾಮ ನಾಮಾಮೃತವ ಕೊಂಬವರೆಲ್ಲ ।
ಪ್ರೇಮದಿಂದಚ್ಯುತ ಪೇಟೆಗೆ ಬನ್ನಿರೆ ಪ

ಒಮ್ಮನವೆರಸಿ ಬನ್ನಿ ।
ನಿಮ್ಮ ಮನಕೆ ಬಂದಂತಳೆದು ಕೊಳ್ಳಿ ॥
ರಾಮಟಂಕೆಯ ಸಲಿಸಿ ಶ್ರೀ ಕೃಷ್ಣನೆಂಬ ।
ಧರ್ಮದ ಸಂತೆ ನೆರೆದಿದೆ ಬನ್ನಿ ೧

ಉಂಟು ನಾಲ್ಕು ಕುದುರೆಗಳು ।
ಎಂಟಾನೆಯ ಬಿರುಬಲೆಯಲ್ಲಿ ಕಟ್ಟಬಹುದು ॥
ಸಾಲವರ್ಣದ ಪಟ್ಟೆಯು ಏಳಿರೆ ।
ಏಳುಲೋಕವು ಬಲ್ಲದು ೨

ಬೆಲೆಯಿಲ್ಲದ ಮುತ್ತುಂಟು ।
ಏಳೇಳ್ಪುಟಿಯ ಹೊಳೆವಪರಂಜಿಯ ಚಿನ್ನವುಂಟು ॥
ಥಳಥಳಿಸುವ ನೀಲಿಯ ಕೊಂಬುವರೆಲ್ಲ ।
ನಳಿನನಾಭನ ಸನ್ನಿಧಿಗೆ ಬನ್ನಿ ೩

ಎರಡು ಕಾಶಿಯಲಳೆವ ಕೊಳಗವು ।
ಪಿರಿದುವೊಂದು ಕಿರಿದೊಂದು ಉಂಟಲ್ಲಿಗೆ ॥
ಗರಳವವೊರಿಸಲು ರತ್ನವು ।
ಮರುತಾಶ್ರಯನ ಸನ್ನಿಧಿಗೆ ೪

ಆರಂಗಡಿಯ ಸುಟ್ಟು ।
ಸೂರೆಮಾಡಿ ಏಳು ಎಂಟು ಹಟ್ಟಕೊರವನೊ...ದುದು ॥
ಸಾರಿಸಿ ನವವಿಧ ಶುಚಿಯ ಹೇಳಿದ ।
ಸರ್ವಾತ್ಮಗೆ ಸೌದೆಯ ೫

ಸುಂಕಿಗರೈವರಿಗೆ ಹರುಷದಿಂದ ।
ಪಂಕಜನಾಭನ ಚೀಲ ತೋರಿ ॥
ಶಂಕೆಯಿಲ್ಲದೆ ನಡೆವ ಅವರನೆಲ್ಲ ।
ವಂಚಿಸಿ ಎದೆಯ ಟೊಣೆದು ಹೋಗುವಾ ೬

ಇಂದೊಂದು ಸರಶಿಗೆ ಬಹಳ ಲಾಭ । ತಾ
ತಂದು ಕುಳಿತುಂಬುದಕೆ ಉಂಟು ॥
ತಂದೆ ಪುರಂದರವಿಠಲ ರಾಯ ।
ಗಂಧವಾಯಿತು ಬೇಹಾರವು ೭

## ೨೫

ವಿಧಿ ನಿಷೇಧವು ನಿನ್ನವರಿಗೆಂತೊ ಹರಿಯೇ ಪ

ವಿಧಿ ನಿನ್ನ ಸ್ಮರಣೆಯು ನಿಷೇಧ ವಿಸ್ಮೃತಿಯೆಂಬ
ವಿಧಿಯನೊಂದನೆ ಬಲ್ಲರಲ್ಲದೇ ಮತ್ತೊಂದು ಅ.ಪ

ಮಿಂದದ್ದೆ ಗಂಗಾದಿ ಪುಣ್ಯತೀರ್ಥಂಗಳು
ಬಂದದ್ದೆ ಪುಣ್ಯಕಾಲ ಸಾಧುಜನರು ॥
ನಿಂದದ್ದೆ ಗಯೆ ವಾರಣಾಸಿ ಕುರುಕ್ಷೇತ್ರ
ಸಂದೇಹವೇಕೆ ಮದದಾನೆ ಪೋದುದೆ ಬೀದಿ ೧

ಕಂಡಕಂಡಲ್ಲಿ ವಿಶ್ವಾದಿ ಮೂರುತಿಯು ಭೂ
ಮಂಡಲದಿ ಶಯನವೆ ನಮಸ್ಕಾರವು ॥
ತಂಡತಂಡದ ಕ್ರಿಯೆಗಳೆಲ್ಲ ನಿನ್ನಯ ಪೂಜೆ
ಮಂಡೆ ಬಾಗಿಸಿ ನಮಿಪ ಭಾಗವತ ಜನಕೆ ೨

ನಡೆದ ನಡಿಗೆಯು ಎಲ್ಲ ಲಕ್ಷ ಪ್ರದಕ್ಷಿಣೆಯು
ನುಡಿವ ನುಡಿಗಳು ಎಲ್ಲ ಗಾಯತ್ರಿ ಮಂತ್ರ ॥
ಕೊಡುವುದೆಲ್ಲವು ಅಗ್ನಿಮುಖದಲ್ಲಿ ಆಹುತಿ
ದೃಢಭಕ್ತರೇನ ಮಾಡಿದರದೇ ಮರ್ಯಾದೆ ೩

ನಷ್ಟವಾದುದು ಎಲ್ಲ ಸಂಚಿತದ ಕರ್ಮವು
ಮುಟ್ಟಲಂಜುವುವೆಲ್ಲ ಆಗಾಮಿಕರ್ಮ ॥
ಸ್ಪಷ್ಟವಾಗಿರುವ ಪ್ರಾರಬ್ಧ ಕರ್ಮವ ಮೀರಿ
ಸೆಟ್ಟಿಮೆಟ್ಟಿದ್ದೆ ಪಟ್ಟಣವೆಂಬುದೇ ನಿಜವು ೪

ಎಲ್ಲಿ ಕುಳ್ಳಿರಲಲ್ಲಿ ಪ್ರಾಯೋಪವೇಶ ಮ
ತ್ತೆಲ್ಲಿ ನೋಡಲು ಮನವು ಅಲ್ಲಿಯೆ ಸಮಾಧಿ ॥
ಎಲ್ಲೆಲ್ಲಿಯೂ ಪುರಂದರವಿಠಲ ರಾಯನ
ಬಲ್ಲವರಿಗೆಲ್ಲಿಹುದು ಪಾಪ ಪುಣ್ಯದ ಲೇಪ ೫

## ೨೬

ಸಕಲ ಗ್ರಹಬಲ ನೀನೆ ಸರಸಿಜಾಕ್ಷ ।
ನಿಖಿಳವೇತಕೆ ಎನಗೆ ವಿಶ್ವವ್ಯಾಪಕ ಮೋಹಿ ಪ

ರವಿ ಚಂದ್ರ ಬುಧ ನೀನೆ ರಾಹು ಕೇತುವು ನೀನೆ
ಕವಿ ಗುರುವು ಶನಿಯು ಮಂಗಳನು ನೀನೆ ॥
ದಿವಸ ರಾತ್ರಿಯು ನೀನೆ ನವವಿಧಾನವು ನೀನೆ
ಭವರೋಗಹರ ನೀನೆ ರಕ್ಷಕನು ನೀನೆ ೧

ಪಕ್ಷಮಾಸವು ನೀನೆ ಪರ್ವಕಾಲವು ನೀನೆ
ನಕ್ಷತ್ರಯೋಗ ಕರಣಗಳು ನೀನೆ ॥
ಅಕ್ಷಯವೆಂದು ದ್ರೌಪದಿಯ ಮಾನವ ಕಾಯ್ದ
ಪಕ್ಷಿವಾಹನ ದೀನ ರಕ್ಷಕನು ನೀನೆ ೨

ಋತು ಕಾಲಗಳು ನೀನೆ ವ್ರತದಿನಂಗಳು ನೀನೆ
ಕ್ರತುವು ಸಂಧ್ಯಾನ ಸದ್ಗತಿಯು ನೀನೆ
ಜಿತವಾಗಿ ಎನ್ನೊಡೆಯ ಪುರಂದರ ವಿಠಲನೆ
ಶ್ರುತಿಗೆ ನಿಲುಕದ ಮಹಾತ್ಮನು ಹರಿಯು ನೀನೆ ೩

## ೨೭

ಹರಿನಾಮಕೀರ್ತನೆ ಅನುದಿನ ಮಾಳ್ಪಗೆ ।
ನರಕ ಭಯಗಳುಂಟೆ? ಪ

ಕೇಸರಿಗಂಜದ ಮೃಗವುಂಟೆ?–ದಿ–।
ನೇಶನಿಗಂಜದ ತನುವುಂಟೆ? ॥
ವಾಸುದೇವ ವೈಕುಂಠ ಜಗನ್ಮಯ ।
ಕೇಶವ ಕೃಷ್ಣ ನೀನೆಂದುಚ್ಚರಿಸುವ ೧

ಕುಲಿಶವನೆದುರಿಪ ಗಿರಿಯುಂಟೆ?–ಬಲು ।
ಪ್ರಳಯ ಬಂದಾಗ ಜೀವಿಪರುಂಟೆ?
ಜಲಜನಾಭ ಗೋವಿಂದ ಜನಾರ್ದನ ।
ಕಲುಷ ಹರಣ ಕರಿರಾಜ ರಕ್ಷಕನೆಂಬ ೨

ಗರುಡಗೆ ಅಂಜದ ಫಣಿಯುಂಟೆ? –ದ–।
ಳ್ಳುರಿಯಲಿ ಬೇಯದ ತೃಣವುಂಟೆ? ॥
ನರಹರಿನಾರಾಯಣ ಕೃಷ್ಣ ಕೇಶವ ।
ಪುರಂದರ ವಿಠಲ ನೀನೆಂದುಚ್ಚರಿಸುವ ೩

## ೨೮

ಹರಿನಾಮದರಗಿಣಿಯು ಹಾರುತಿದೆ ಜಗದಿ।
ಪರಮ ಭಾಗವತರು ಬಲೆಯ ಬೀಸುವರು ಪ

ಕೋಪವೆಂಬ ಮಾರ್ಜಾಲವು ಕಂಡರೆ ನುಂಗುವುದು ।
ತಾಪವೆಂಬ ಹುಲಿಯು ಕೊಂಡೊಯ್ವುದದನು ॥
ಕಾಪಾಡಿರದನು ಹೃದಯದೊಳಗಿಂಬಿಟ್ಟು ।
ಅಪತ್ತಿಗೊದಗುವುದು ಈ ಮುದ್ದು ಗಿಣಿಯು ೧

ದಾರಿಯ ನಡೆವಾಗ ಚೋರರ ಭಯವಿಲ್ಲ ।
ಮಾರಿಬಂದರದನು ಹೊಡೆದು ನೂಕುವುದು ॥
ಕ್ರೂರ ಯಮಭಟರನು ಮೂಗು ರೆಕ್ಕೆಯಲಿ ಬಡಿದು ।
ದಾರಿ ತೋರುವುದು ಮುರಾರಿಯ ಪಟ್ಟಣಕೆ ೨

ಎಷ್ಟೆಂದು ವರ್ಣಿಸಲಿ ಈ ಮುದ್ದು ಅರಗಿಣಿಯು ।
ಹೊಟ್ಟೆಯೊಳೀರೇಳು ಜಗವನಿಂಬಿಟ್ಟ ॥
ಸೃಷ್ಟೀಶ ಪುರಂದರವಿಠಲನ ನೆನೆ ನೆನೆದು ।
ಮುಟ್ಟಿ ಭಜಿಸುವುದು ಈ ಮುದ್ದು ಗಿಣಿಯು ೩

## ೨೯

ಹರಿಯೆ........................................... ಪ

ಹರಿ ನಿನ್ನ ಕೃಪೆಯೆನಗೆ ಚಂದ್ರ – ತಾರಾಬಲವು ।
ಹರಿ ನಿನ್ನ ಕರುಣವೇ ರವಿಯ ಬಲವು ॥
ಹರಿ ನಿನ್ನೊಲುಮೆಯೆನಗೆ ಗುರುಬಲವು ಭೃಗುಬಲವು ।
ಹರಿ ನಿನ್ನ ಮೋಹವೇ ಶನಿಯ ಬಲವು ೧

ಮಂಗಳಾತ್ಮಕ ನಿನ್ನ ಅಂಗದರುಶನವೆನಗೆ ।
ಮಂಗಳನ ಬಲವು ಎನ್ನಂಗಕೀಗ ॥
ರಂಗಯ್ಯ ನಿನ್ನ ಚರಣಾರವಿಂದವ ನೋಡೆ ।
ಹಿಂಗಿ ಪೋಪುದು ಅಘವು ಸೌಮ್ಯಬಲವು ೨

ಆದಿಪುರುಷನೆ ನಿನ್ನ ಅರಿಪುದೇ ಕೇತುಬಲ ।
ಅದಿಮೂಲನೆ ನಿನ್ನ ಗುಣ ಕಥನವ ॥
ಆದರಿಸಿ ಕೊಂಡಾಡುವುದೆ ಎನಗೆ ರಾಹುಬಲ ।
ಆದಿಮೂರುತಿ ಬ್ರಹ್ಮ ಪುರಂದರ ವಿಠಲ ೩

## ೩೦

ಹರಿಯೆಂಬ ನಾಮಾಮೃತ ರುಚಿಕರವೆಲ್ಲ
ಪರಮಭಕ್ತರಿಗಲ್ಲದೆ – ಮಿಕ್ಕ –।
ಅರಿಯದ ಕಡುಮೂರ್ಖ ಮನುಜರಿಗೆಲ್ಲ ತಾ
ಹರುಷವಾಗಬಲ್ಲದೆ? ಪ

ಅಂದುಗೆ ಅರಳೆಲೆಯಿಟ್ಟರೆ ಕೋಡಗ
ಕಂದನಾಗಬಲ್ಲದೆ? ।
ಹಂದಿಗೆ ತುಪ್ಪ–ಸಕ್ಕರೆ ತಿನ್ನಿಸಲು ಗ–
ಜೇಂದ್ರನಾಗಬಲ್ಲದೆ? ॥
ಇಂದು ಪೂರ್ಣಕಳೆಯೊಳು ತಾನು ತೋರಲು

ಅಂಧ ನೋಡಬಲ್ಲನೆ? –ನಮ್ಮ– ।
ಇಂದಿರೆಯರಸನ ನಾಮದ ಮಹಿಮೆಯ
ಮಂದಜ್ಞಾನಿ ಬಲ್ಲನೆ ೧

ಪರಿಪರಿ ಬಂಗಾರವಿಟ್ಟರೆ ದಾಸಿ ತಾ
ಅರಸಿಯಾಗಬಲ್ಲಳೆ? ।
ಭರದಿಂದ ಶ್ವಾನನ ಬಾಲವ ತಿದ್ದಲು
ಸರಳವಾಗಬಲ್ಲದೆ? ॥
ಉರಗಗೆ ಕ್ಷೀರವನೆರೆಯಲು ಅದು ತನ್ನ
ಗರಳವ ಬಿಡಬಲ್ಲದೆ? ॥
ಭರದಿಂದ ನೀಲಿಯ ಕರದಿಂದ ತೊಳೆಯಲು
ಕರಿದು ಹೋಗಬಲ್ಲದೆ? । ೨

ಮೋಡಕೆ ಮಯೂರ ಕುಣಿವಂತೆ ಕುಕ್ಕುಟ
ನೋಡಿ ಕುಣಿಯಬಲ್ಲದೆ? ।
ಗೋಡೆಗೆ ಎದುರಾಗಿ ನಾಟ್ಯವಾಡಲು
ನೋಡಿ ಸುಖಿಸಬಲ್ಲದೆ? ॥
ಹಾಡಿನ ಕುಶಲತೆ ಬಧಿರನು ತಾ ಸವಿ–
ಮಾಡಿ ಕೇಳಬಲ್ಲನೆ? ।
ರೂಢಿಗೊಡೆಯ ನಮ್ಮ ಪುರಂದರ ವಿಠಲನ
ಮೂಢಜ್ಞಾನಿ ಬಲ್ಲನೆ ೩

## ೩೧

ಹೇಗೆ ಅರ್ಚಿಸಲಿ ಮೆಚ್ಚಿಸಲಿ ನಿನ್ನ
ನಾಗಶಯನ ನಾರದವಂದಿತನೆ ದೇವಾ ಪ

ಮಂಗಳಾಭಿಷೇಕಕೆ ಉದಕ ತರುವೆನೆನೆ
ಗಂಗೆಯ ಅಂಗುಟದಿ ಪಡೆದಿಹೆಯೊ ॥
ಸಂಗೀತ ಕೀರ್ತನೆ ಪಾಡುವೆನೆಂದರೆ
ಹಿಂಗದೆ ತುಂಬುರ ನಾರದರು ಪಾಡುವರೊ ೧

ಪುಷ್ಪವ ತಂದು ನಿನಗರ್ಪಿಸುವೆನೆಂದರೆ
ಪುಷ್ಪ ಫುಲ್ಲಯಿಸಿದೆ ಹೊಕ್ಕುಳಲಿ ॥
ಮುಪ್ಪತ್ತು ಮೂರ್ಕೋಟಿ ದೇವತೆಗಳು ನಿನ
ಗೊಪ್ಪಿಸೆ ನೈವೇದ್ಯ ನಿತ್ಯತೃಪ್ತನು ನೀನು ೨

ಕೋಟಿಸೂರ್ಯರ ಕಾಂತಿ ಮಿಗಿಲಾದವನಿಗೊಂದು
ಮೋಟು ದೀವಿಗೆ ಬೆಳಗೆ ಬೆಳಕಹುದೆ? ॥
ಸಾಟಿಗಾಣದ ಸಿರಿ ಉರದೊಳು ನೆಲಸಿರೆ
ಪೋಟುಗಾಸನು ಎಂತು ಕಾಣಿಕೆಯಿಡಲಯ್ಯ ೩

ಹಾಸಿಗೆಯನು ನಿನಗೆ ಹಾಸುವೆನೆಂದರೆ
ಶೇಷನ ಮೈಮೇಲೆ ಪವಡಿಸಿಹೆ ॥
ಬೀಸಣಿಕೆಯ ತಂದು ಬೀಸುವೆನೆಂದರೆ
ಆಸಮೀರಣ ಚಾಮರವ ಬೀಸುತಿಹನೋ ೪

ನಿತ್ಯ ಗುಣಾರ್ಣವ ನಿಜಸುಖ ಪರಿಪೂರ್ಣ
ಸತ್ತುಚಿತ್ತಾನಂದ ಸನಕಾದಿ ವಂದ್ಯ ॥
ಮುಕ್ತಿದಾಯಕ ನಮ್ಮ ಪುರಂದರ ವಿಠಲನು
ಭಕ್ತಿಪ್ರಿಯನು ಎಂದು ಭಜಿಸಿ ಕೊಂಡಾಡುವೆ ೫

## ೩೨

ಹೇಗೆ ಉದ್ಧಾರ ಮಾಡುವನು – ಶ್ರೀ ಹರಿ ।
ಹೀಗೆ ದಿನಗಳೆದುಳಿದವನ ಪ

ರಾಗದಿಂದಲಿ ಭಾಗವತರಿಗೆ ।
ಬಾಗದಲೆ ತಲೆ ಹೋಗುವಾತನ ಅ.ಪ

ಅರುಣೋದಯಲೆದ್ದು ಹರಿಯೆನ್ನದಲೆ ಗೊಡ್ಡು ।
ಹರಟೆಯಲಿ ಹೊತ್ತು ಏರಿಸಿದವನ ॥
ಸಿರಿ ತುಲಸಿಗೆ ನೀರನೆರೆದು ನಿರಂತರ ।
ಧರಿಸದೆ ಮೃತ್ತಿಕೆ ತಿರುಗುತಲಿಪ್ಪನ ॥

ಮರೆತು ಸ್ನಾನ ಮನೆಮನೆ ತಿರುಗುತ ಹೊಟ್ಟೆ ।
ಕೆರೆದಾಗ ಬೇಯಿಸಿಕೊಂಡು ತಿನ್ನುವನ ೧

ಗುರುಹಿರಿಯರ ಸೇವೆ ಜರೆದು ನಿರಂತರ ।
ಪರನಿಂದೆಯ ಮಾಡಿ ನಗುತಿಹನ ॥
ಪರಹೆಣ್ಣು ಪರಹೊನ್ನು ಕರಗತವಾಗಲೆಂದು ।
ಪರಲೋಕ ಭಯಬಿಟ್ಟು ತಿರುಗುವನ ॥
ತರುಣಿ ಮಕ್ಕಳನು ಇರದೆ ಪೋಷಿಸಲೆಂದು ।
ಪರರ ದ್ರವ್ಯ ಕಳವು ವಂಚನೆ ಮಾಳ್ಪನ ೨

ನಡೆಯಿಲ್ಲ ನುಡಿಯಿಲ್ಲ ಪಡೆಯಲಿಲ್ಲ ಪುಣ್ಯವ ।
ಬಿಡವು ನಿನ್ನ ಪಾಪಕರ್ಮಗಳೆಂದಿಗು ॥
ಸಡಲಿದಾಯುಷ್ಯವು ಕಡೆಗೂ ಸ್ಥಿರವೆಂದು ।
ಕಡುಮೆಚ್ಚಿ ವಿಷಯದೊಳಿಪ್ಪನ ॥
ಒಡೆಯ ಶ್ರೀಪುರಂದರ ವಿಠ್ಠಲರಾಯನ ।
ಅಡಿಗಳ ಪಿಡಿಯದೆ ಕಡೆಗೂ ಕೆಟ್ಟವನ ೩

## ಪುರಾಣ ಮೂಲದ ಹರಿ ಸ್ತುತಿ

### ೩೩

ಅಕೊ ಹಾಗಿಹನೆ ಇಕೊ ಹೀಗಿಹನೆ ಪ

ಕಾಲಿಲ್ಲದೆ ನಡೆಸುವ ಕೈಯಿಲ್ಲದೆ ಓಡಿಸುವ
ಹಲ್ಲಿಲ್ಲದೆ ತಿನ್ನಿಸುವ ಹೊಟ್ಟೆಯಿಲ್ಲದೆ ಉಣಿಸುವ ೧

ಕಣ್ಣಿಲ್ಲದೆ ಕಾಣಿಸುವ ಕಿವಿಯಿಲ್ಲದೆ ಕೇಳಿಸುವ
ಕಾಣಿಸಿಕೊಳ್ಳನೀತ ಒಳಗೆ ಹೊರಗೆ ತಿರುಗುವ ೨

ಶ್ವೇತ ದ್ವೀಪದಲ್ಲಿ ನಿಂತು ಅನಂತಾಸನದಲಿ ಮಲಗಿ
ನಿತ್ಯ ವೈಕುಂಠ ವಾಸ ಪುರಂದರವಿಠಲ ೩

### ೩೪

ಇನ್ನೇಕೆ ಯಮನ ಬಾಧೆಗಳು? ।
ಎನ್ನ ಜಿಹ್ವೆಯೊಳಗೆ ಹರಿನಾಮವಿರಲು ಪ

ಪತಿತ ಪಾವನನೆಂಬ ನಾಮ–ಸಕಲ ।
ಶ್ರುತಿತತಿಗಳಿಗೆಲ್ಲ ನಿಲುಕದೀ ನಾಮ ॥
ಕ್ರತುಕೋಟಿ ಫಲ ಒಂದೇ ನಾಮ–ಸದ್ ।
ಗತಿಗೆ ಸಂಗಡ ಬಾಹೋದಲೆ ದಿವ್ಯನಾಮ ೧

ಮುನ್ನ ಪ್ರಹ್ಲಾದನೆ ಸಾಕ್ಷಿ – ನಮ್ಮ ।
ಕನ್ಯಾಶಿರೋಮಣಿ ದ್ರೌಪದಿ ಸಾಕ್ಷಿ ॥
ಚೆನ್ನ ಅಜಮಿಳನೊಬ್ಬ ಸಾಕ್ಷಿ ಆ ।
ಉನ್ನಂತ ಲೋಕವಾಳುವ ಧ್ರುವ ಸಾಕ್ಷಿ ೨

ಹದಿನಾಲ್ಕು ಲೋಕವಾಳುವ – ನಮ್ಮ ।
ಮದನ ಜನಕನಾಗಿ ಮಹಿಮೆ ತೋರುವ ॥
ಪದುಮನಾಭನಾಗಿ ಮೆರೆವ– ನಮ್ಮ ।
ಪುರಂದರವಿಠಲನ ಹರುಷದಿ ಕರೆವ ೩

## ೩೫

ಇಂತು ವೇದಾಂತಗಳಲ್ಲಿ ಸುರರು ನಿನ್ನ
ಎಣಿಸುವರಹುದಹುದೈ–ನಿ–
ನ್ನಂತವ ತಿಳಿಯಲು ಬ್ರಹ್ಮಾದಿಗಳಿಗೆ
ಅಳವಲ್ಲಹುದಹುದೈ । ಪ

ರಂಡೆಯ ಮಕ್ಕಳು ಕುಂಡಗೋಳಕರು ರಾಯರು ನಿನ್ನಿಂದೈ ।
ಪಂಡಿತರಾದಾ ದ್ವಿಜರಿಗೆ ಭಿಕ್ಷಾಪಾತ್ರವು ನಿನ್ನಿಂದೈ ॥
ಮಂಡೆನೇವರಿಸಿ ಮೊಲೆಯನಿತ್ತವಳಿಗೆ ಮರಣವು ನಿನ್ನಿಂದೈ ।
ಭಂಡಾಟದಿ ಮೈಗೊಟ್ಟ ಗೋಪಿಯರು ಪಾವನ ನಿನ್ನಿಂದೈ ೧

ತೊತ್ತಿನ ಮಗನಿಗೆ ಒಲಿದು ನಿನ್ನಯ ಗುಣ ತೋರಿದೆ ಅಹುದಹುದೈ ।
ಉತ್ತಮರನು ನೀನಡವಿ ಸೇರಿಸಿದೆ ಉತ್ತಮನಹುದಹುದೈ ॥
ಅತ್ತೆಯನುಳುಹಿದೆ ಮಾವನ ಮಡುಹಿದೆ ಏತರ ನ್ಯಾಯವಿದೈ ।
ಮತ್ತನಾಗಿ ನಿನ್ನ ಬೈದ ಪಾತಕಿಯ ಮೈಯೊಳಗಿರಿಸಿದೆಯೈ ೨

ತಂದೆಯ ಕೊಂದು ಕಂದನ ಸಲಹಿದ ಚಂದವು ನಿನ್ನಿಂದೈ ।
ಕಂದನ ಕೊಂದು ತಂದೆಯ ಸಲಹಿದೆ ಏತರ ನ್ಯಾಯವಿದೈ ॥
ವಂದಿಸಿ ದಾನವ ಕೊಟ್ಟ ಬಲೀಂದ್ರನ ಬಂಧಿಸಿದಹುದಹುದೈ ।
ಮಂದರಧರ ಶ್ರೀ ಪುರಂದರವಿಠಲ ಮಾಡಿದ್ದೇ ಮರಿಯಾದೈ ೩

## ೩೬

ಗೋವರ್ಧನಗಿರಿಯ ನೆಗಹಿಬಂದು – ನೀನಿಲ್ಲಿ
ಹಾವಿನ ಮಂಚದ ಮೇಲೆ ಮಲಗಿದೆಯೊ ರಂಗ? ಪ

ಮಧುರೆಯೊಳಗೆ ಜನಿಸಿ ಗೋಕುಲಕ್ಕೆ ತೆರಳಿ ।
ಹಾದಿಹೋಗಿ ಕಾಲು ನೊಂದು ಮಲಗಿದೆಯೊ ರಂಗ? ೧

ಅಸುರೆ ಪೂತಣಿಯ ಮೊಲೆಯುಂಡು ಶಕಟನ ಒದೆದು ।
ಅಸುಗುಂದಿ ಮಲಗಿದೆಯೊ– ಶ್ರೀರಂಗ ೨

ಕಡಹದ ಮರದಿಂದ ಧುಮುಕಿ ಕಾಳಿಂಗನ ।
ಹೆಡೆಯ ತುಳಿದು ಕಾಲ್ನೊಂದು ಮಲಗಿದೆಯೊ? ೩

ಬಾಲ ಬ್ರಾಹ್ಮಣನಾಗಿ ಬಲಿಯ ದಾನವ ಬೇಡಿ ।
ನೆಲನನಳೆದು ಕಾಲುನೊಂದು ಮಲಗಿದೆಯೊ? ೪

ಶ್ರೀಶ ಶ್ರೀರಂಗರಾಜ ಪರಮಪಾವನ ।
ಶೇಷಶಯನ ಶ್ರೀಪುರಂದರ ವಿಠಲ ೫

## ೩೭

ತ್ರುಟಿಗೆ ಕ್ಷಣಕೆ ನೆನೆಮನವೇ – ಹರಿಯ ।
ತ್ರುಟಿಗೆ ಕ್ಷಣಕೆ ನೆನೆಮನವೆ ಪ

ತ್ರುಟಿಗೆ ಕ್ಷಣಕೆ ನೆನೆ ಕ್ಷಣಕೆ ಲವಕೆ ನೆನೆ ।
ಘಟಿಗೆ ಘಟಿಗೆ ನೆನೆ, ಇರುಳು ಹಗಲು ನೆನೆ ಅ.ಪ

ಜಠರದಿ ಜಗತಿಗೆ ಹಿರಿಯ–ಜಗ ।
ನ್ನಾಟಕಮೋಹ ಸೂತ್ರಧಾರಿಯ ॥
ಪಟು ಹಿರಣ್ಯಾಕ್ಷ ಸಂಹಾರಿಯ ।
ನಿಷ್ಠುರನಾದ ಕಂಸಾರಿಯ ೧

ರಣಿತ ಕಂಕಣ ನೂಪುರಿಯ–ರು ।
ಕ್ಮಿಣಿಯನಾಳುವ ದೊಡ್ಡ ದೊರೆಯ ॥
ಗುಣನಿಧಿ ಗೋವರ್ಧನಧಾರಿಯ–ನೀ– ।
ಕರುಣಿಯು ಅವನೆಂದರಿಯ ೨

ನವನೀತದಧಿತಸ್ಕರಿಯ –ಈ ।
ಭವಹರ ಒಡೆಯನೆಂದರಿಯ ॥
ಜವನು ಕೇಳಲು ನಿನ್ನ ಮೊರೆಯ –ಚಿಹಿ ।
ಅವನ ನಾಲಗ್ಗೆ ಮುಳ್ಳು ಮುರಿಯ ೩

ಮನಕಭಾಗಿಗೆ ಶ್ರುತಿಯರಿಯ –ದಂಥ ।
ಘನಪಾಪಿಗಳಿಗವ ದೊರೆಯ ॥
ನೆನೆವರ ಪಾಲಿಪುದ ಮರೆಯ –ಸು ।
ಮ್ಮನೆ ಇರಲವ ನಮ್ಮ ಪೊರೆಯ ೪

ಸ್ಮರಿಸಲು ಯಮ ನಿನ್ನ ದಾರಿಯ –ಹೋಗ ।
ವರಭಾರತಿಪತಿ ಮರೆಯ ।
ಪುರಂದರವಿಠಲ ದೊರೆಯ –ನೆನೆ–
ದಿರೆ ಯಮ ನಿನ್ನನು ಕೊರೆಯ ೫

## ೩೮

ನಾರಾಯಣ ತೇ ನಮೋ ನಮೋ ।
ನಾರದಸನ್ನುತ ನಮೋ ನಮೋ ಪ

ಮುರಹರ ನಗಧರ ಮುಕುಂದ ಮಾಧವ ।
ಗರುಡಗಮನ ಪಂಕಜನಾಭ ॥
ಪರಮಪುರುಷ ಭವಭಂಜನ ಕೇಶವ ।
ನರಮೃಗ ಶರೀರ ನಮೋ ನಮೋ ೧

ಜಲಧಿಶಯನ ರವಿಚಂದ್ರ ವಿಲೋಚನ ।
ಜಲರುಹಭವನುತ ಚರಣಯುಗ ॥
ಬಲಿಬಂಧನ ಗೋವರ್ಧನಧಾರಿ ।
ನಳಿನೋದರ ತೇ ನಮೋ ನಮೋ ೨

ಆದಿದೇವ ಸಕಲಾಗಮ ಪೂಜಿತ ।
ಯಾದವಕುಲ ಮೋಹನರೂಪ ॥
ವೇದೋದ್ಧರ ಶ್ರೀವೆಂಕಟನಾಯಕ ।
ಮೋದದ ಪುರಂದರ ವಿಠಲ ನಮೋ ನಮೋ ೩

# ೩೯

ನಾರಾಯಣಾಯ ನಮೋ ನಾಗೇಂದ್ರಶಯನಾಯ ।
ನಾರದಾದ್ಯಖಿಳ ಮುನಿನಮಿತ ಪಾದಾಂಭೋಜ ।
ಸೇರಿದರೆ ಪೊರೆವ ಕಂಸಾರಿ ರಕ್ಷಿಪನೆಮ್ಮ ।
ಕಾರುಣ್ಯದಿಂದ ಒಲಿದು ಪ

ಪಾಂಡ್ಯದೇಶದೊಳು ಇಂದ್ರದ್ಯುಮ್ನನೆಂಬ ಭೂ ।
ಮಂಡಲಾಧಿಪನು ವೈರಾಗ್ಯದಲಿ ಹರಿಪಾದ ।
ಪುಂಡರೀಕಧ್ಯಾನಪರನಾಗಿ ತಪದೊಳಿರೆ
ಚಂಡತಾಪಸನಗಸ್ತ್ಯ ॥
ಹಿಂಡು ಶಿಷ್ಯರುವೆರೆಸಿ ಬರಲು ಸತ್ಕರಿಸದಿರೆ ।
ಕಂಡುಗ್ರಕೋಪದಿಂ ಗಜವಾಗಿ ಜನಿಸಲು ।
ದ್ದಂಡ ಶಾಪವನಿತ್ತು ಮುನಿ ತಿರುಗುತ್ತಲ್ಯೆ
ಶುಂಡಾಲನಾದನರಸ ೧

ಕ್ಷೀರಸಾಗರದಲೆರಡೀರೈದು ಯೋಜನದ ।
ಮೇರೆಯಲಿ ವರತ್ರಿಕೂಟಾದ್ರಿ ಶೃಂಗತ್ರಯದಿ ।
ರಾರಾಜಿಸುವ ತಾಮ್ರ-ರಜತ-ಕಾಂಚನದಿಂದ
ನಾರಾಯಣಾಂಶದಿಂದ ॥
ಪಾರಿಜಾತಾಂಭೋಜ ಬಕುಳ ಮಲ್ಲಿಗೆ ಜಾಜಿ ।
ಸೌರಭದಲಶ್ವತ್ಥ ಪೂಗ ಪುನ್ನಾಗ ಜಂ ।
ಭೀರ ತರು ಗುಲ್ಮ ಶಾಖಾಮೃಗಗಳೆಸೆವಲ್ಲಿ
ವಾರಣೇಂದ್ರನು ಮೆರೆದನು ೨

ಆನೆ ಹೆಣ್ಣಾನೆ ಮರಿಯಾನೆಗಳ ಸಹಿತಲ್ಲಿ ।
ಕಾನನದಿ ತೊಳಲುತ್ತ ಬೇಸಗೆಯ ಬಿಸಿಲಲ್ಲಿ ।
ತಾನು ನೀರಡಿಸಿ ಬಂದೊಂದು ಸರಸಿಯ ತಟಕೆ
ಪಾನಾಭಿಲಾಷೆಯಿಂದ ॥
ನಾನಾಪ್ರಕಾರದಿಂ ಜಲಕ್ರೀಡೆಯಾಡುತಿರ ।
ಲೇನಿದೆತ್ತಣ ರಭಸವೆಂದುಗ್ರಕೋಪದಿಂ ।

ಆನೆಗಳು ಬಾಯ್ದೆರೆದು ನುಂಗಿತೊಂದಂಘ್ರಿಯನು
ಏನೆಂಬೆನಾಕ್ಷಣದೊಳು ೩

ಒತ್ತಿ ಪಿಡಿದೆಳೆಯುತಿರೆ ಎತ್ತಣದಿನೇನೆನುತ ।
ಮತ್ತ ಇಭರಾಜನೌಡೊತ್ತಿ ನೋಡುತ್ತಂಘ್ರಿ ।
ಎತ್ತಿ ತಂದನು ತಡಿಗೆ ಮತ್ತೆ ನಡುಮಡುವಿನೊಳು
ಅತ್ತಲೇ ತಿರುಗೆ ನೆಗಳೆ ॥
ಇತ್ತಂಡದಿಂತು ಕಾದಿದರು ಸಾವಿರ ವರುಷ ।
ಉತ್ತರಿಸಿತೇನೆಂಬೆ ಮತ್ತಾ ಗಜೇದ್ರಂಗೆ ।
ಸತ್ತ್ವ ತಗ್ಗಿತು ತನ್ನ ಮನದೊಳಗೆ ಚಿಂತಿಸಿತು
ಮತ್ತಾರು ಗತಿಯೆನುತಲಿ ೪

ಬಂದುದಾ ಸಮಯದಲಿ ಹಿಂದೆ ಮಾಡಿದ ಪುಣ್ಯ ।
ದಿಂದ ದಿವ್ಯಜ್ಞಾನ ಕಣ್ದೆರೆದು ಮನದೊಳರ ।
ವಿಂದನಾಭಾಚ್ಯುತ ಮುಕುಂದ ಮಾಧವ ಕೃಷ್ಣ
ನಿಖಿಲ ಮುನಿವೃಂದವಂದ್ಯ ॥
ಇಂದಿರಾರಮಣ ಗೋವಿಂದ ಕೇಶವ ಭಕ್ತ ।
ಬಂಧು ಕರುಣಾಸಿಂಧು ತಂದೆ ನೀ ಗತಿಯೆನಗೆ ।
ಇಂದು ಸಿಲ್ಕಿದೆನು ಬಲು ದಂದುಗದ ಮಾಯಾ ಪ್ರ–
ಬಂಧಕನೆ ನೆಗಳಿನಿಂದ ೫

ಪರಮಾತ್ಮ ಪರಮೇಶ ಪರತತ್ವ ಪರಿಪೂಜ್ಯ ।
ಪರತರ ಪರಂಜ್ಯೋತಿ ಪರಮ ಪಾವನಮೂರ್ತಿ ।
ಪರಮೇಷ್ಠಿ ಪರಬ್ರಹ್ಮ ಪರಮ ಪರಮಾಕಾಶ ।
ಪರಿಪೂರ್ಣ ಪರಮಪುರುಷ ॥
ನಿರುಪಮ ನಿಜಾನಂದ ನಿರ್ಲಯ ನಿರಾಕಾರ ।
ನಿರವಧಿಕ ನಿರ್ಗುಣ ನಿರಂಜನ ನಿರಾಧಾರ ।
ನಿರವದ್ಯ ನಿಸ್ಸಂಗ ನಿಶ್ಚಿಂತ ನಿಖಿಲೇಶ
ಇರದೆ ನೀ ಸಲಹೆಂದನು ೬

ಇಂತೆನುತ ಮೂರ್ಛೆಯಲಿ ಗುಪ್ತಕಂಠಸ್ವರದ ।
ಕಾಂತ ನಡುನೀರೊಳಗೆ ತೇಲಿ ಮುಳುಗುತಲಿರೆ ಅ– ।

ಚಿಂತ್ಯ ಮಹಿಮನು ಕೇಳಿ ಕರುಣದಿಂದಾ ಮಹಾ-
ನಂತಶಯನದೊಳೆದ್ದನು ॥
ಸಂತವಿಡುತುಡೆ- ಮುಡಿಯ ಗರುಡನೇರದೆ ಬಂದು ।
ಚಿಂತೆ ಬೇಡೆನುತಭಯಹಸ್ತವನು ಕೊಡುತ ಶ್ರೀ- ।
ಕಾಂತ ಭಕ್ತನ ಬಳಿಗೆ ಬಂದೆಡದ ಕೈಯಿಂದ
ದಂತಿವರನನು ನೆಗಹಿದ ೭

ನೆಗಳ ಬಾಯನು ಚಕ್ರದಲಿ ಸೀಳಿ ಕರಿವರದ ।
ಒಗುವ ಕರಣದಲಿ ಮೈದಡಹಲ್ಕೆ ಗಜಜನ್ಮ ।
ತೆಗೆದುದಾಕ್ಷಣಕೆ ಮಣಿಮುಕುಟ – ಕುಂಡಲದಿಂದ
ನಗಧರನು ಓಲೈಸಿದ ॥
ವಿಗಡದೇವಲ ಮುನಿಯ ಶಾಪದಲಿ ಧಾರುಣಿಯೊ- ।
ಳಗೆ ನಕ್ರನಾಗಿ ಹೂಹೂ ಎಂಬ ಗಂಧರ್ವ ।
ಮಗುಳಿ ಪುರವನು ಕಂಡು ನಿಜಗತಿಗೆ ಐದಿದನು
ಕಮಲಾಕ್ಷ ಮಿಗೆ ಮೆರೆದನು ೮

ಮಣಿಮುಕುಟ ಕುಂಡಲ ಪದಕಹಾರ ಕಡಗಕಂ- ।
ಕಣ ಕೌಸ್ತುಭೋ ಜ್ವಲಾಂಗದ
ವೈಜಯಂತಿ ಭೂ- ।
ಷಣ ಶಂಖ-ಚಕ್ರ-ಗದೆ-ಪದ್ಮ ಧರಿಸಿಹ ಹಸ್ತ
ಪಣೆಯ ಕಸ್ತುರಿ ತಿಲಕದಾ ॥
ಝಣಝಣಿಪ ನೂಪುರದ ದಂತಪಂಕ್ತಿಯ ಕೃಪೇ- ।
ಕ್ಷಣದ ಸಿರಿಮೊಗದ ಪೀತಾಂಬರದ ಮೂರುತಿಗೆ ।
ಮಣಿದು ಜಯ ಜಯ ಜಯಾ ಎಂಬ ಸುರನರರಸಂ- ।
ದಣಿಯಿಂದೆ ಹರಿ ಮೆರೆದನು ೯

ಹರಿಹರಿಎನುತ್ತಂಘ್ರಿಗೆರಗಲಿಭವರನನಾ- ।
ದರದಿಂದಲೆತ್ತುತಲಿ ಕೇಳ್ಮಗನೆ ನೀನೆನ್ನ ।
ವಿರಜ ಶರಪರಿಧಿಯಾಸರವನಹಿಪತಿಯನ್ನು
ಪರಜನ್ಮನೀ ಲಕುಮಿಯ ॥
ಪರಮೇಷ್ಠಿ-ಭವರ ಮನು-ಮುನಿಗಳನು ಧರಣಿಯನು ।

ತರಣಿ ಶಶಿ ನವಶಕ್ತಿ ವಿಷ್ಣುಧರ್ಮವತಾರು– ।
ಪರ ವರಗದಾ ಶಂಖ ಚಕ್ರಾಂಬುಜಂಗಳನು
ಸ್ಮರಿಸುವರ ಕಾವೆನೆಂದ ೧೦

ಆವಾವನಿದನುದಯದಲ್ಲೆದ್ದು ಭಕ್ತಿಯಲಿ ।
ಭಾವಶುದ್ಧಿಯಲಿ ತಾ ಹೇಳಿಕೊಳುವನೊ ಅವನ– ।
ಘಾವಳಿಯ ಪರಿಹರಿಸಿ ಸುಜ್ಞಾನವೀವೆ ದೇ–
ಹಾವಸಾನದಲೆನುತಲಿ ॥
ಶ್ರೀವಾಸುದೇವನಾಜ್ಞಾಪಿಸಿ ಗಜೇಂದ್ರ ಸಹಿ– ।
ತಾವಿಹಂಗಾಧಿಪನನೇರಿ ವೈಕುಂಠಕ್ಕೆ ।
ದೇವ ಬಿಜಯಂಗೈದ ಪುರಂದರ ವಿಠಲನ
ಸೇವಕರಿಗಿದುಚಿತ್ರವೆ ೧೧

## ೪೦

ನಿನ್ನ ನಾನೇನೆಂದೆನೋ – ರಂಗಯ್ಯ ರಂಗ
ನಿನ್ನ ನಾನೇನೆಂದೆನೊ ಪ

ನಿನ್ನ ನಾನೇನೆಂದೆ ಚಿನ್ಮಯ ಮೂರುತಿ
ಪನ್ನಗಶಯನ ಪಾಲ್ಗಡಲೊಡೆಯನೆ ಕೃಷ್ಣ ಅ.ಪ

ಧೀರಸೋಮಕ ವೇದಚೋರನ ಮಡುಹಿದೆ
ವಾರಿಧಿಗಿಳಿದ ಪರ್ವತವ ಪೊತ್ತೆ
ಧಾರಿಣಿಯನು ತಂದು ದನುಜದಲ್ಲಣನಾದೆ
ನಾರಸಿಂಹ ನಿನಗೆ ನಮೊ ಎಂದೆನಲ್ಲದೆ

ನೀರ ಪೊಕ್ಕವನೆಂದೆನೆ – ಬೆನ್ನಿನ ಮೇಲೆ
ಭಾರ ತಾಳ್ದವನೆಂದೆನೆ– ಮದ್ದಿನಗಿದು
ಬೇರ ಮೆದ್ದವನೆಂದೆನೆ – ರಕ್ಕಸರೊಳು
ಹೋರಾಡಿದವನೆಂದು ಹೊಗಳಿದೆನಲ್ಲದೆ ೧

ಧರೆಯದಾನವ ಬೇಡಿ ನೆಲವ ಮೂರಡಿ ಮಾಡಿ
ಪರಶುವಿಡಿದು ಕ್ಷತ್ರಿಯರ ಸವರಿ

ಚರಣದಿ ಪಾಷಾಣ ಹೆಣ್ಣು ಮಾಡಿದ ಪುಣ್ಯ
ಚರಿತ ಯಾದವ ಪತಿ ಶರಣೆಂದೆನಲ್ಲದೆ

ತಿರುಕ ಹಾರುವನೆಂದೆನೆ – ಹೆತ್ತ ತಾಯ
ಶಿರಕೆ ಮುನಿವನೆಂದೆನೆ – ವನ ದೇಶದಿ
ಧುರಕೆ ನಿಂದವನೆಂದೆನೆ – ಪೂತನಿಯ ಮೊಲೆಯ
ಹರಿದು ಕೊಂದವನೆಂದು ಸ್ತುತಿಸಿದೆನಲ್ಲದೆ ೨

ಚಿತ್ತಜ ಕೋಟಿಲಾವಣ್ಯ ಮುಪ್ಪುರದೊಳು
ಉತ್ತಮ ಸ್ತ್ರೀಯರ ವ್ರತವಳಿದೆ
ಮತ್ತೆ ಕಲ್ಕಿಯಾದೆ ಮಲೆತರ ಮಡುಹಿದೆ
ಉತ್ತಮ ಶ್ರೀರಾಮನೆಂದು ಸ್ತುತಿಸಿದೆನಲ್ಲದೆ

ಬತ್ತಲೆನಿಂತವನೆಂದೆನೆ ತೇಜಿಯನೇರಿ
ಒತ್ತಿಬಾಹವನೆಂದೆನೆ ಬಾರಿಬಾರಿಗೆ
ಸತ್ತುಹುಟ್ಟುವನೆಂದೆನೆ ಪುರಂದರ ವಿಠಲ
ಹತ್ತವತಾರದ ಹರಿಯೆಂದೆನಲ್ಲದೆ * ೩

## ೪೧

ನೀನೆ ಬಲ್ಲಿದನೊ – ಹರಿ ನಿನ್ನ– ।
ದಾಸರೆ ಬಲ್ಲಿದರೊ ಪ

ನಾನಾ ತರದಿ ನಿಧಾನಿಸಿ ನೋಡಲು
ನೀನೆ ಭಕ್ತಾಧೀನನಾದ ಮೇಲೆ ಅ.ಪ

ಜಲಜಭವಾಂಡದ ಒಡೆಯನೆಂದೆನಿಸಲು ।
ಬಲುಬಲು ದೊಡ್ಡವನಹುದಹುದಾದಡೆ ॥
ಅಲಸದೆ ಹಗಲಿರುಳೆನ್ನದೆ ಅನುದಿನ ।
ಬಲಿಯ ಮನೆಯ ಬಾಗಿಲ ಕಾಯ್ದ ಮೇಲೆ ೧

---

* ಈ ಕೀರ್ತನೆ ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ಖ್ಯಾತಿಯಿಂದ ಪುರುಹೂತ ಸಹಿತ ಸುರ ।
ವ್ರಾತವು ನಿನ್ನನು ಒತ್ತಿ ಓಲೈಸಲು ॥
ಭೂತಳದೊಳು ಸಂಪ್ರೀತಿಗೆ ಸಿಲುಕಿ ನೀ ।
ಪಾರ್ಥನ ರಥಕೆ ಸೂತನಾದ ಮೇಲೆ ೨

ಪರಮಪುರುಷ ಪರಬೊಮ್ಮ ನೀನೆನುತಲಿ ।
ನಿರುತದಿ ಶ್ರುತಿಯು ಕೊಂಡಾಡುತಿರೆ ॥
ವರಪಾಂಡವರರಮನೆಯೊಳು ಊಳಿಗ ।
ಕರೆಕರೆದಲ್ಲಿಗೆ ಪೋದಪೋದ ಮೇಲೆ ೩

ಧುರದಲಿ ಪಣೆಯನೊಡೆದ ಭೀಷ್ಮನ ಸಂ– ।
ಹರಿಪೆನೆನುತ ಚಕ್ರವ ಪಿಡಿಯೆ ॥
ಹರಿ ನಿನ್ನ ಕರುಣದ ಜೋಡು ತೊಟ್ಟಿರಲವ– ।
ನಿರವ ಕಾಣುತ ಸುಮ್ಮನೆ ತಿರುಗಿದ ಮೇಲೆ ೪

ತರಳನು ಕರೆಯಲು ಭರದಿ ಕಂಬದಿ ಬಂದು ।
ನರಮೃಗರೂಪ ಭಕ್ತರ ತೆತ್ತಿಗನೆ ॥
ವರದ ಪುರಂದರವಿಠಲರಾಯ ನಿನ್ನ ।
ಸ್ಮರಿಪರ ಮನದಲಿ ಸೆರೆಯು ಸಿಕ್ಕಿದ ಮೇಲೆ ೫

## ೪೨

ರಂಗನ ನೋಡಿರೆ ರಾಯ ಚೆನ್ನಿಗ ನರ–
ಸಿಂಗನ ದೇವಕಿದೇವಿಯ ಸುತನ ಪ

ಥಳಿಥಳಿಸುವ ನಗುಮೊಗದ ಚೆನ್ನಿಗನ ।
ಪೊಳೆವ ವಜ್ರದ ಕಿರೀಟವಿಟ್ಟವನ ॥
ಪ್ರಳಯ ಕಾಲದಿ ವಟಪತ್ರಶಯನನ ।
ನಳಿನಭವನ ನಾಭಿಯಲ್ಲಿ ಪೆತ್ತವನ ೧

ಆಣಿಮುತ್ತಿನ ದುಂಡು ಮಕರಕುಂಡಲನ ।
ಭಾನುಪ್ರಭೆಯ ಭುಜಕೀರ್ತಿಯೊಪ್ಪುವನ ॥

ಕಾಣಿಸೆ ಅಪರಂಜಿ ಕಡಗ ಕಂಕಣ ಹೊಸ ।
ಮಾಣಿಕದುಂಗುರವಿಟ್ಟು ಮೆರೆವನ ೨

ಕಮಲಾಮನೋಹರ ಕಮಲಜ ಪಿತನ ।
ರಮಣಿಗೆ ಪಾರಿಜಾತವನೇ ತಂದವನ ॥
ಕ್ರಮದಿಂದ ಭಸ್ಮಾಸುರನ ಕೊಂದವನ ।
ರಮೆಯಾಣ್ಮನೆನ್ನಲು ಇಹಪರವೀವನ ೩

ಶುಕ್ರವಾರ ಪುಲಕು ಪೂಜೆಗೊಂಬವನ ।
ಸಕ್ಕರೆ–ಹಾಲು–ಬೆಣ್ಣೆಯ ಮೆಲ್ಲುವವನ ॥
ಗಕ್ಕನೆ ಸುರರಿಗೆ ಅಮೃತವಿತ್ತವನ ।
ರಕ್ಕಸದಲ್ಲಣ ರಾವಣಾಂತಕನ ೪

ಪಾಪವಿನಾಶದಿ ಸ್ನಾನವ ಮಾಡಿ ।
ಪಾಪಗಳೆಲ್ಲ ಬೇಗನೆ ಬಿಟ್ಟು ಓಡಿ ॥
ಈ ಪರಿಯಿಂದಲಿ ಮೂರುತಿ ನೋಡಿ ।
ಶ್ರೀಪತಿ ಪುರಂದರವಿಠಲನ ಪಾಡಿ ೫

## ೪೩

ರಂಗನೆಂಥವನೆಂಥವನೆಲೆ ತಂಗಿ ಪ

ರಂಗನೆಂಥವ ಅವನಂಗ ತಿಳಿಯದು ಬ್ರಹ್ಮಾದಿಗಳಿಗೆ ಅ.ಪ

ಆಗಮವ ತಂದಿಹನೆ । ರಂಗ ।
ಬೇಗದಿ ಗಿರಿಯ ಪೊತ್ತಿಹನೆ ॥
ಮೂಗಿಂದ ಭೂಮಿಯ ಕಿತ್ತಿಹನೆ । ಕಂದ ।
ಕೂಗಲು ಕಂಬದಿ ಬಂದ ಕಾಣಕ್ಕ ೧

ಧರಣಿಯ ಈರಡಿ ಮಾಡಿದನೆ । ಭೂ ।
ಸುರರಿಗೆ ದಾನವ ನೀಡಿದನೆ ॥
ನೆರೆದು ಕಪಿಹಿಂಡು ಕೂಡಿದನೆ ।ಫಣಿ ।
ಶಿರದಲ್ಲಿ ಕುಣಿಕುಣಿದಾಡಿದನಕ್ಕ ೨

ಉಟ್ಟದ್ದು ಬಿಟ್ಟು ತಾ ನಿಂತಿಹನೆ । ರಂಗ ।
ದಿಟ್ಟಾದ ಕುದುರೆಯನೇರಿದನೆ ॥
ದುಷ್ಟರನೆಲ್ಲ ಅಳಿದಿಹನೆ । ನಮ್ಮ ।
ಬಿಟ್ಟಾದಿ ಪುರಂದರವಿಠಲ ಕಾಣಕ್ಕ * ೩

## ೪೪

ಹರಿನಾರಾಯಣ ಹರಿನಾರಾಯಣ ।
ಹರಿನಾರಾಯಣ ನೆನು ಮನವೆ ಪ

ನಾರಾಯಣನೆಂಬ ನಾಮದ ಬೀಜವ ।
ನಾರದ ಬಿತ್ತಿದ ಧರೆಯೊಳಗೆ ಅ.ಪ

ತರಳಧ್ರುವನಿಂದಲಿ ಅಂಕುರಿಸಿತು ಅದು ।
ವರಪ್ರಹ್ಲಾದನಿಂದ ಮೊಳಕೆಯಾಯ್ತು ॥
ಧರಣೀಶ ರುಕ್ಮಾಂಗದನಿಂದ ಚಿಗುರಿತು ।
ಕುರು ಪಿತಾಮಹನಿಂದ ಹೂವಾಯ್ತು ೧

ವಿಜಯನ ಸತಿಯಿಂದ ಫಲವಾಯ್ತು–ಅದು ।
ಗಜೇಂದ್ರನಿಂದ ದೋರೆ ಹಣ್ಣಾಯ್ತು ॥
ದ್ವಿಜ ಶುಕಮುನಿಯಿಂದೆ ಫಲ ಪಕ್ವವಾಯಿತು ।
ಅಜಾಮಿಳ ತಾನುಂಡು ರಸ ಸವಿದ ೨

ಕಾಮಿತ ಫಲವೀವ ನಾಮವೊಂದಿರಲಾಗಿ ।
ಹೋಮ ನೇಮ ಜಪತಪವೇಕೆ ॥
ಸ್ವಾಮಿ ಶ್ರೀ ಪುರಂದರವಿಠಲ ರಾಯನ ।
ನೇಮದಿಂದಲಿ ನೀ ನೆನೆ ಮನವೆ ೩

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

## ೪೫

ಹೂವ ತರುವರ ಮನೆಗೆ ಹುಲ್ಲ ತರುವ ।
ಅವ್ವ ಲಕುಮಿಯ ರಮಣ  ಅವಗಿಲ್ಲ ಗರುವ ಪ

ಒಂದು ದಳ ಶ್ರೀ ತುಳಸಿ ಗಂಧ–ಪುಷ್ಪವ ತಂದು ।
ಇಂದಿರಾಕಾಂತನಿಗೆ ಅರ್ಪಿಸಿರಲು ॥
ಬಂಧಗಳ ಪರಿಹರಿಸಿ ಸಿಂಧುಶಯನನು ತನ್ನ ।
ಮಂದಿರದೊಳಿರಿಸಿ ಆನಂದವುಣಿಸುವನು ೧

ಪರಿಪರಿಯ ಪೂಜೆಗಳ ಕರಿವರದಗರ್ಪಿಸಲು ।
ಪರಿಪೂರ್ಣ ತಾನವನ ಕರವ ಪಿಡಿದು ॥
ಸರಿಸಿಜಾಕ್ಷನು ತ್ವರದಿ ಸಾರೂಪ್ಯವನ್ನಿತ್ತು ।
ಮರುತನಂತರ್ಗತನು ಹರುಷದಲಿ ಪೊರೆವ ೨

ತೊಂಡರಾ ಮನೆಗಳಲಿ [ತೊಂಡು ಗೆಲಸವ ಗೈವ] ।
ಪಾಂಡವರ ಮನೆಯಲ್ಲಿ ಕುದುರೆಗಳ ತೊಳೆದ ॥
ಅಂಡಜಾಸನ ನಮ್ಮ ಪುರಂದರ ವಿಠಲನು ।
ತೊಂಡರಿಗೆ ತೊಂಡನಾದ ಹಿಂಡು ದೈವದ ಗಂಡ ೩

## ೪೬

ಹೊಸಪರಿಯೊ–ರಂಗ–ಹೊಸ ಪರಿಯೊ ।
ಶಶಿಧರವಂದ್ಯನೆ ಕುಸುಮಜಜನಕ ಪ

ಬೊಮ್ಮಗೆ ನೀ ಪರಬೊಮ್ಮನಾದೆಯೊ ರಂಗ ।
ತಮ್ಮಗೆ ನೀ ಮತ್ತೆ ತಮ್ಮನಾದೆಯೊ ರಂಗ ॥
ಮಗನ ಮಗಗೆ ಮೊಮ್ಮಗನಾದೆಯೊ ರಂಗ ।
ಮಗನ ಮಗಳ ನೀ ಮದುವೆಯಾದೆಯೊ ರಂಗ ೧

ಮಾವಗೆ ನೀ ಮತ್ತೆ ಮಾವನಾದೆಯೊ ರಂಗ ।
ಮಾವನ ಮಗಳ ನೀ ಮದುವೆಯಾದೆಯೊ ರಂಗ ॥
ಭಾವಗೆ ನೀ ಮತ್ತೆ ಭಾವನಾದೆಯೊ ರಂಗ ।
ಭಾವಜವೈರಿಗೆ ಸಖನಾದೆಯೊ ರಂಗ ೨

ಅತ್ತೆಯ ಅರ್ಥಿಯಿಂದಾಳಿದೆಯೋ ರಂಗ ।
ಅತ್ತೆಯ ಮಗಳ ನೀ ಮದುವೆಯಾದೆಯೊ ರಂಗ ॥
ಮತ್ತೊಬ್ಬರಿಗುಂಟೆ ಈ ಪರಿ ಮಹಿಮೆಯು ।
ಕರ್ತೃ ಶ್ರೀ ಪುರಂದರವಿಠಲನಿಗಲ್ಲದೆ ೩

## ii. ವೆಂಕಟರಮಣನ ಸ್ತುತಿ

### ೪೭

ಇಂದು ನಾನೇನು ಸುಕೃತವ ಮಾಡಿದೆನೊ
ಇಂದಿರೆಯರಸು ವೆಂಕಟ ಬಂದ ಮನೆಗೆ ಪ

ನೊಸಲ ತಿದ್ದಿದ ಬೊಟ್ಟಿನೆಸೆವ ಕಸ್ತೂರಿಯು
ಎಸಳು ಕಂಗಳ ಥಾಳ ಹೊಸ ಪರಿಯ ನೋಟ ॥
ಎಸೆವ ಅಮೃತ ಸಾರ ರಸ ಸವಿ ಮಾತು
ಕುಸುಮದ ಸೊಬಗ ವೆಂಕಟ ಬಂದ ಮನೆಗೆ ೧

ಹಾರ ಕೇಯೂರ ಹೊನ್ನುಂಗುರದ ಬೆರಳು
ಹಾರದ ನಡುವೆ ಹಾಕಿದುವೇಳು ಪದಕ ॥
ತೋರ ಮುತ್ತಿನ ಕಂಠಮಾಲೆ ಮಾಣಿಕ ಕೋ
ನೇರಿ ಗಿರಿವಾಸ ವೆಂಕಟ ಬಂದ ಮನೆಗೆ ೨

ಬಿಗಿದು ಸುತ್ತಿದ ನೀಲ ಬಿಡುಮುತ್ತಿನ ಒಂಟಿ
ಮುಗುಳು ಬಿರಿದಂದದ ನಗೆ ದಂತಪಂಕ್ತಿ ॥
ಝುಗಿಪ ಪೀತಾಂಬರ ಉಡೆಯ ಕಠಾರಿ ಪ-
ನ್ನಗಗಿರಿವಾಸ ವೆಂಕಟ ಬಂದ ಮನೆಗೆ ೩

ಬಾಲಚಂದ್ರನ ಪೋಲ್ವ ಕಪೋಲ ಕುಂಡಲವು
ನೀಲ ಮಾಣಿಕ್ಯದಾಭರಣವನಿಟ್ಟು ॥
ಕಾಲ ಪೆಂಡೆಯವು ರತುನದ ಹಾವುಗೆಯು
ಮೇಲುಗಿರಿವಾಸ ವೆಂಕಟ ಬಂದ ಮನೆಗೆ ೪

ಕರಯುಗಲದಲಿ–ಶಂಖ–ಚಕ್ರವ ಪಿಡಿದು
ಎರಡೇಳು ಭುವನ ತನ್ನುದರದೊಳಿಟ್ಟು ॥
ಗರುಡನ ಹೆಗಲೇರಿ ಜಗವ ಪಾಲಿಸುವ
ಪುರಂದರ ವಿಠಲ ವೆಂಕಟ ಬಂದ ಮನೆಗೆ ೫

## ೪೮

ಒಳ್ಳೆಯದೊಳ್ಳೆಯದು ಪ

ಎಲ್ಲ ಸ್ಥಳವ ಬಿಟ್ಟು ಇಲ್ಲಿ ಅಡಗಿದುದು ಬಲ್ಲಿದತನವೆ ? ಅ.ಪ

ಬಿಡೆನೊ ಬಿಡೆನೊ ಎನ್ನ ಒಡೆಯ ತಿರುಮಲ ನಿನ್ನ ।
ಉಡೆಯ ಪೀತಾಂಬರ ಪಿಡಿದು ನಿಲಿಸಿಕೊಂಬೆ ೧

ಅರಿವು ಮರೆವು ಮಾಡಿ ತಿರುಗಿಸಿದೆಯಾ ಎನ್ನ ।
ಕೊರಳಿಗೆ ನಿನ್ನಯ ಚರಣ ಕಟ್ಟಿಕೊಂಬೆ ೨

ಅತ್ತೆಯ ಮಕ್ಕಳಿಗೆ ತೆತ್ತಿಗ ನಿನಗಾಗಿ ।
ವಿತ್ತದ ರಾಶಿ ತಂದಿತ್ತ ಪರಿಯಲಿ ೩

ಅತ್ತಲಿತ್ತಲಿ ನೋಡಿನ್ನೆತ್ತ ಪೋಗಲಿ ನಿನ್ನ ।
ಚಿತ್ತದಲ್ಲಿ ಹೊತ್ತು ಕಟ್ಟಿಕೊಂಬೆನು ೪

ಇರುಳು ಹಗಲು ಬಿಡೆದೆ ವರಪುರಂದರಗೊಲಿದೆ ।
ಅರಿದು ಏನು ಇಷ್ಟು ಪುರಂದರವಿಠಲನೆ ೫

## ೪೯

ನಿನ್ನ ನೋಡಿ ಧನ್ಯನಾದೆನೊ – ಹೇ ಶ್ರೀನಿವಾಸ ಪ

ನಿನ್ನ ನೋಡಿ ಧನ್ಯನಾದೆ ಎನ್ನ ಮನದಿ ನಿಂತು ಸುಪ್ರ–
ಸನ್ನ ದಯಮಾಡಿ ನೀನು ಮುನ್ನಿನಂತೆ ಸಲಹ ಬೇಕೋ ಅ.ಪ

ಲಕ್ಷ್ಮೀರಮಣ ಪಕ್ಷಿವಾಹನ ಲಕ್ಷ್ಮಿ ನಿನ್ನ ವಕ್ಷದಲ್ಲಿ
ರಕ್ಷಣಶಿಕ್ಷಣದಕ್ಷ ಪಾಂಡವಪಕ್ಷ ಕಮಲಾಕ್ಷ ರಕ್ಷಿಸು ೧

ದೇಶದೇಶಗಳನು ತಿರುಗಿ ಆಶಾಬದ್ಧನಾದೆ ಸ್ವಾಮಿ
ದಾಸನೆನಿಸಿ ಎನ್ನ ಜಗದೀಶ ಕಾಯೋ ವಾಸುದೇವ ೨

ಕಂತುಜನಕ ಕೊಟ್ಟು ಎನಗೆ ಅಂತರಂಗದ ಸೇವೆಯನ್ನು
ಅಂತರವಿಲ್ಲದೆ ಪಾಲಿಸಯ್ಯ ಹೊಂತಕಾರಿ ಪುರಂದರವಿಠಲ * ౩

## ೫೦

ಬಂದು ನಿಂದಿಹ ನೋಡಿ- ಭೂತಳದಿ ವೆಂಕಟ
ಇಂದಿರೆಯನೊಡಗೂಡಿ- ಒಪ್ಪುವ ನಿರಂತರ
ಪೊಂದಿ ಭಜನೆಯ ಮಾಡಿ- ಆನಂದ ಬೇಡಿ ಪ

ವಂದಿಸುತ ಮನದೊಳಗೆ ಇವನಡಿ-
ದ್ವಂದ್ವ ಭಜಿಸಲು ಬಂದ ಭಯಹರ ।
ಇಂದುಧರ ಸುರವೃಂದನುತ ಗೋ-
ವಿಂದ ಘನ ದಯಾಸಿಂಧು ಶ್ರೀಹರಿ ಅ.ಪ

ದ್ವಾರದೆಡಬಲದಲ್ಲಿ- ಜಯವಿಜಯರಿಬ್ಬರು
ಸೇರಿ ಸೇವಿಪರಲ್ಲಿ- ಸನಕಾದಿನುತ ಶೃಂ-
ಗಾರನಿಧಿ ಅಂಗದಲಿ- ಮುತ್ತಿನಲಿ ಶೋಭಿಪ
ಹಾರ ಹೊಂದಿಹುದಲ್ಲಿ- ವಿಸ್ತಾರದಲ್ಲಿ ॥
ವಾರವಾರಕೆ ಪೂಜೆಗೊಂಬುವ
ಹಾರ ಮುಕುಟಾಭರಣ ಕುಂಡಲ-
ಧಾರಿ ಭುಜ ಕೇಯೂರ ಭೂಷಿತ
ಮಾರಪಿತ ಗುಣ ಮೋಹನಾಂಗ ॥
ಚಾರು ಪೀತಾಂಬರ ಕಟಿಯ ಕರ-
ವೀರ ಕಲ್ಹಾರಾದಿ ಹೂವಿನ
ಹಾರ ಕೊರಳೊಳು ಎಸೆಯುತಿರೆ ವದ-।
ನಾರವಿಂದವು ನಗುತ ನಲಿಯುತ ೧

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ಎಲ್ಲ ಭಕುತರಭೀಷ್ಟ-ಕೊಡುವುದಕೆ ತಾ ಕೈ-
ವಲ್ಯ ಸ್ಥಾನವ ಬಿಟ್ಟ- ಶೇಷಾದ್ರಿ ಮಂದಿರ
ದಲ್ಲಿ ಲೋಲುಪ ದಿಟ್ಟ-ಸೌಭಾಗ್ಯನಿಧಿಗೆದು
ರಿಲ್ಲ ಭುಜಬಲ ಪುಷ್ಪ-ಕಸ್ತೂರಿಯಿಟ್ಟ ॥
ಚೆಲ್ವ ಪಣೆಯಲಿ ಶೋಭಿಸುವ ಸಿರಿ-
ವಲ್ಲಭನ ಗುಣ ಪೊಗಳದಿಹ ಜಗ-
ಖುಲ್ಲರೆದೆದಲ್ಲಣ ಪರಾಕ್ರಮ
ಮಲ್ಲಮರ್ದನ ಮಾತುಳಾಂತಕ ॥
ಫಲ್ಗುಣನ ಸಖ ಪ್ರಕಟನಾಗಿಹ
ದುರ್ಲಭನು ಅಘದೂರ ಬಹುಮಾಂ
ಗಲ್ಯ ಹ್ರಯಯವ ಮಾಡಿ ಸೃಷ್ಟಿಗೆ
ಉಲ್ಲಾಸ ಕೊಡುತಲಿ ಚೆಂದದಿಂದಲಿ ೨

ಪದಕ-ಕೌಸ್ತುಭದಾರ-ಸರಿಗೆಯ ಸುಕಂಧರ
ಸುದರ್ಶನ-ದರಧಾರ-ಸುಂದರ ಮನೋಹರ
ಪದಯುಗದಿ ನೂಪುರ-ಇಟ್ಟಿಹನು ಸನ್ಮುನಿ
ಹೃದಯ ಸ್ಥಿತ ಗಂಭೀರ-ಬಹುದಾನ ಶೂರ ॥
ವಿಧಿ-ಭವಾದ್ಯರ ಪೊರೆವ ದಾತನು
ತುದಿ ಮೊದಲು ಮಧ್ಯವು ವಿರಹಿತನು
ಉದುಭವಾದಿಗಳೀವ ಕರ್ತನು
ತ್ರಿದಶಪೂಜಿತ ತ್ರಿಭುವನೇಶ ॥
ಸದುನಲಾಸದಿ ಸ್ವಾಮಿ ತೀರ್ಥದಿ
ಉದುಸುತಿರೆ ಸಿರಿ ಮಹಿಳೆ ಸಹಿತದಿ
ಪದುಮನಾಭ ಪುರಂದರ ವಿಠಲನು
ಮುದದಿ ಬ್ರಹ್ಮೋತ್ಸವದಿ ಮೆರೆಯುತ ೩

## ೫೧

ಬಾರಯ್ಯ ವೆಂಕಟರಮಣ ಪ

ಬಾರಯ್ಯ ವೆಂಕಟರಮಣನೆ ನೀನೆನಗೆ
ಧಾರಿಣಿಯೊಳು ನಿನ್ನ ಮೂರುತಿ ತೋರುತ ಅ.ಪ

ಮನವೆಂಬ ಮಂಟಪ ನಿನಗೆ ಹಾಕಿ ಎನ್ನ
ತನುವನೊಪ್ಪಿಸಿ ಕೈಯ ಮುಗಿವೆನಯ್ಯ ॥
ವನಜಜ ಭವ ಸುರಮುನಿಗಳು ಭಜಿಸುವ
ಘನ ಮಹಿಮನೆ ಪಾದಕೆರಗಲೆನ್ನ ಶಿರ ೧

ಲಿಂಗದೇಹವೆಂಬ ಪವಳಿ ಶೃಂಗರಿಸಿ
ಅಂಗವ ನಿನಗೆ ಕಾಣಿಕೆಯ ನೀಡುವೆ ॥
ಮಂಗಳಮೂರುತಿ ಅಂಗನೆ ಸಹಿತ– ಭು
ಜಂಗಶಯನ ಎನ್ನ ಕಂಗಳುತವವೀಯೋ ೨

ಕಡಗ ಕಿರುಗೆಜ್ಜೆ ಪೆಂಡೆಗಳಿಂದಲೊಪ್ಪುವ
ಉಡುಗೆ ಪೀತಾಂಬರ ಕೊರಳ ಕೌಸ್ತುಭ ॥
ಪಿಡಿದ ಶಂಖ ಚಕ್ರ ಕರ್ಣಕುಂಡಲದಿಂದ
ಕಡಲಶಯನ ಎನ್ನ ಹೃದಯದೊಳಗೆ ನಿಲ್ಲೊ ೩

ಒಡೆಯ ನೀನೆನಗೆ ಅನಾದಿ ಕಾಲದಿಂದ
ಬಡವನು ನಾ ನಿನ್ನ ದಾಸನಯ್ಯ ॥
ಕಡುಕರುಣದಿಂದ ದಾಸತ್ವ ನೀಡು ಗ–
ರುಡಗಮನನೆ ವೆಂಕಟೇಶ ಎನ್ನ ಮನಕೆ ೪

ಬರಿಮನೆಯಲ್ಲವು ಪರಿವಾರವು ಉಂಟು
ಪರಮಪುರುಷ ನಿನ್ನ ರೂಪಗಳುಂಟು ॥
ಸಿರಿದೇವಿ ಸಹಿತದಿ ಪುರಂದರ ವಿಠಲನೆ
ಕರುಣದಿಂದಲಿ ಮನ್ಮಂದಿರದೊಳಗೆ ೫

## ೫೨

ಬಾರಯ್ಯ ವೆಂಕಟರಮಣ ಭಕ್ತರ ನಿಧಿಯೆ
ಬಾರೋ ವಿಶ್ವಂಭರಣ ಪ

ತೋರೋ ನಿನ್ನಯ ದಯೆ ತೋಯಜಾಂಬಕನೆ ಅ.ಪ

ವೇದಗೋಚರ ಬಾರೋ ಆದಿಕಚ್ಛಪ ಬಾರೋ
ಮೋದಸೂಕರ ಬಾರೋ ಸದಯ ನರಸಿಂಹ ಬಾರೋ ೧

ವಾಮನ ಭಾರ್ಗವ ಬಾರೋ ರಾಮಕೃಷ್ಣನೆ ಬಾರೋ
ಪ್ರೇಮದ ಬುದ್ಧನೆ ಬಾರೋ ಸ್ವಾಮಿ ಕಲ್ಕಿಯೆ ಬಾರೋ ೨

ಅರವಿಂದನಾಭ ಬಾರೋ ಸುರರ ಪ್ರಭುವೆ ಬಾರೋ
ಪುರುಹೂತವಂದ್ಯ ಬಾರೋ ಪುರಂದರವಿಠಲ ಬಾರೋ ೩

## ೫೩

ವೆಂಕಟರಮಣ ವೇದಾಂತ ನಿನ್ನಯ ಪಾದ
ಪಂಕಜ ಕಂಡ ಮೇಲೆ– ಇಂಥ
ಮಂಕುಜನರ ಬೇಡಿಸುವುದುಚಿತವೇ
ಶಂಖಚಕ್ರಾಂಕಿತನೇ ಪ

ಕ್ಷೀರಸಾಗರ ಮಥನಿಸಿ ಪೊಂದಿದಾತಗೆ
ನೀರು ಮಜ್ಜಿಗೆ ಕಡವೆ ॥
ಚಾರು ಕಲ್ಪವೃಕ್ಷದಡಿಯಲ್ಲಿ ಕುಳಿತಂಗೆ
ದೋರೆ ತಿಂತ್ರಿಣಿ ಬಯಕೆ? ೧

ಸಾರ್ವಭೂಪಾಲನ ಸೂನುವೆನಿಸಿಕೊಂಡು
ಸೋರೆ ಕೂಳಿನ ತಿರುಕೆ ॥
ನಾರಿ ಲಕ್ಷ್ಮೀಕಾಂತ ನಿನ್ನ ನಂಬಿದವಗೆ
ದಾರಿದ್ರ್ಯದಂಜಿಕೆಯೆ? ೨

ಸುರನದಿಯಲಿ ಮಿಂದು ಶುಚಿಯಾದ ಬಳಿಕಿನ್ನು
ತೀರ್ಥದ ಅಟ್ಟುಳಿಯೇ ॥
ಕರುಣಾನಿಧಿಯೆಂದು ಮೊರೆಹೊಕ್ಕ ದಾಸಗೆ
ದುರಿತದ ದುಷ್ಫಲವೆ? ೩

ಗರುಡನ ಮಂತ್ರವ ಕಲಿತು ಜಪಿಸುವಂಗೆ
ಉರಗನ ಹಾವಳಿಯೆ ॥
ಹರಿಯ ಪಕ್ಕದೊಳು ಮನೆ ಕಟ್ಟಿದಾತಂಗೆ
ಕರಿಗಳ ಭೀತಿಯುಂಟೆ? ೪

ಪರಮಪುರುಷ ಸುಗುಣಾತ್ಮಕ ನೀನೆಂದು
ಮರೆಹೊಕ್ಕೆ ಕಾಯೊ ಎನ್ನ ॥
ಉರಗಾದ್ರಿವಾಸ ಶ್ರೀ ಪುರಂದರವಿಠಲನೆ
ಪರಬ್ರಹ್ಮ ನಾರಾಯಣ ೫

## ೫೪

ವೆಂಕಟಾಚಲ ನಿಲಯಂ ವೈಕುಂಠ ಪುರವಾಸಂ ಪ

ಪಂಕಜನೇತ್ರಂ ಪರಮಪವಿತ್ರಂ
ಶಂಖಚಕ್ರಧರ ಚಿನ್ಮಯ ರೂಪಂ ಅ.ಪ

ಅಂಬುಜಭವವಿನುತಂ ಅಗಣಿತ ಗುಣನಾಮಂ
ತುಂಬುರು ನಾರದ ಗಾನವಿನೋದಂ
ಅಂಬುಧಿಶಯನಂ ಅಗಣಿತನಾಮಂ ೧

ಪಾಹಿ ಪಾಂಡವಪಾಲಂ ಕೌರವ ಹರಣಂ
ಬಾಹು ಪರಾಕ್ರಮ ಫಣಿಪತಿ ಶಯನಂ
ಅಹಲ್ಯಾಶಾಪವಿಮೋಚನಚರಣಂ ೨

ಸಕಲವೇದವಿಚಾರಂ ಸರ್ವಜೀವಿ ನೇತಾರಂ
ಮಕರಕುಂಡಲಧರ ಮದನಗೋಪಾಲಂ
ಭಕ್ತವಿಪೋಷಣ ಪುರಂದರವಿಠಲಂ ೩

# ಕೃಷ್ಣಲೀಲೆ

## ೫೫

ಅಕ್ಕ ನಂದಗೋಪನ ಅರಮನೆಯೊಳಗೊಬ್ಬ ।
ಅಕ್ರೂರ ಬಂದನಂತೆ ಪ

ಹೊಕ್ಕು ಬಳಕೆಯಿಲ್ಲ ಹೊಸಬನು ಇವನಂತೆ ।
ಇಕ್ಕೋ ಬಾಗಿಲ ಮುಂದೆ ಈಗ ರಥವ ಕಂಡೆ ಅ.ಪ

ಮಧುರಾ ಪಟ್ಟಣವಂತೆ ಮಾವನ ಮನೆಯಂತೆ ।
ನದಿಯ ದಾಟಲುಬೇಕಂತೆ ॥
ಎದುರು ದಾರಿಲ್ಲವಂತೆ ಏನೆಂಬೆ ಏಣಾಕ್ಷಿ ।
ಉದಯದಿ ಪಯಣವಂತೆ ೧

ಒಳ್ಳೆ ವೇಳೆಗಳಂತೆ ಬಿಲ್ಲುಹಬ್ಬಗಳಂತೆ ।
ಎಲ್ಲಾ ಬೀದಿ ಸಿಂಗರವಂತೆ ॥
ಮಲ್ಲರ ಕೂಟವಂತೆ ಮತ್ತೆ ಕಾಳಗವಂತೆ ।
ಅಲ್ಲೆ ತಾಯ್ತಂದೆಗಳ ಕಾಲಿಗೆ ನಿಗಳವಂತೆ ೨

ಮತ್ತೆ ಪಾಂಡವರಂತೆ ಮೋಹದ ಸೋದರರಂತೆ ।
ಅತ್ತೆಯ ಮಕ್ಕಳಂತೆ ॥
ಸುತ್ತ ಶತ್ರುಗಳಂತೆ ಸಕಲ ಕಾರ್ಯಗಳಂತೆ ।
ಚಿತ್ತಜನಯ್ಯನ ಚಿತ್ತ ಎರಡಾಯ್ತಂತೆ ೩

ಅಲ್ಲಿ ಪುಟ್ಟಿದನಂತೆ ಅರಸನಳಿಯನಂತೆ ।
ಇಲ್ಲಿಗೆ ಬಂದನಂತೆ ॥

## ೫೮

ಆಡ ಹೋಗಲು ಬೇಡವೊ-ರಂಗಯ್ಯ ।
ಬೇಡಿಕೊಂಬೆನು ನಿನ್ನನು ಪ

ಆಡ ಹೋಗಲುಬೇಡ ಗಾಡಿಕಾರ್ತಿಯರೊಳು ।
ಕೂಡಿ ಕೆಡಲು ಬೇಡವೊ-ರಂಗಯ್ಯ ಅ.ಪ

ನೀರೊಳು ಮುಳುಗೆಂಬರೊ-ನಿನ್ನನು ದೊಡ್ಡ ।
ಭಾರವ ಹೊರು ಎಂಬರೊ ॥
ಕೋರೆದಾಡೆಗಳಿಂದ ಸೀಳಿ ರಕ್ಕಸನೊಡಲ ।
ಹಾರವ ಹಾಕೆಂಬರೊ-ರಂಗಯ್ಯ ೧

ಪೊಡವಿಯನಳೆಯೆಂಬರೊ-ನಿನಗೆ ದೊಡ್ಡ ।
ಕೊಡಲಿಯ ಪಿಡಿಯೆಂಬರೊ ॥
ಕಿಡಿಗಣ್ಣ ರುದ್ರನ ವರದ ದಶಕಂಠನ ।
ಮಡುಹಿ ನೀ ಬಾರೆಂಬರೊ-ರಂಗಯ್ಯ ೨

ಬೆಟ್ಟವನೆತ್ತೆಂಬರೊ-ನಿನ್ನನು ಬರಿ-।
ಬಟ್ಟಾಗಿ ತಿರುಗೆಂಬರೊ ॥
ಪುಟ್ಟ ತೇಜಿಯನೇರಿ ನಲಿನಲಿದಾಡುತ ।
ದಿಟ್ಟ ಪುರಂದರವಿಠಲ-ರಂಗಯ್ಯ ೩

## ೫೯

ಆಡ ಹೋಗೋಣ ಬಾರೊ ರಂಗ ।
ಓಡಿ ಹೋಗಲು ಬೇಡೊ ಕೃಷ್ಣ ಪ

ಅಣ್ಣೆಕಲ್ಲು ಗೋಲಿ ಗಜುಗ ।
ಚಿಣ್ಣಿಕೋಲು ಚೆಂಡು ಬುಗುರಿ ॥
ಕಣ್ಣು ಮುಚ್ಚಾಲೆ ಹಲವು ಕೂಟ ।
ಬಣ್ಣದಾಟಗಳನೆಲ್ಲ ೧

ಸೋಲು–ಗೆಲುವಿಗೆಲ್ಲ ನೀನು ।
ಬಾಲಕರೊಳು ಕೂಡಿಕೊಂಡು ॥
ಮೇಲೆ ಮಮತೆಯಿಂದೆ ಸಾನು–।
ಕೂಲವಾಗಿ ನಡೆಸುವಂತೆ ೨

ಪುಟ್ಟ ಪುಟ್ಟ ಕೊಳಲು ಕಂಬಳಿ ।
ಕಟ್ಟಿ ಬುತ್ತಿ ಕೈಯಲಿ ಕೋಲು ॥
ದಿಟ್ಟ ಚೆಲುವನಾದ ಪುರಂದರ–।
ವಿಠಲ ಗೋವಳರ ರಾಯ ೩

## ೬೦

ಆಡ ಹೋದಲ್ಲಿ ಮಕ್ಕಳು–ಎನ್ನನು–।
ಆಡಿಕೊಂಬರು ನೋಡಮ್ಮ ಪ

ನೋಡಿ ನೋಡಿ ಇತ್ತ ಮುಖವ ।
ಮಾಡಿ ಕಣ್ಣ ಮಿಟುವರಮ್ಮ ಅ.ಪ

ದೇವಕಿ ಪೆತ್ತಳಂತೆ–ವಸು–।
ದೇವನೆಂಬವ ಪಿತನಂತೆ ॥
ಕಾವಲಿನೊಳು ಪುಟ್ಟಿದೆನಂತೆ ।
ಮಾವ ಕಂಸಗಂಜಿ ಬಂದೆನಂತೆ ೧

ನೀನೆನ್ನ ಪೆತ್ತಿಲ್ಲವಂತೆ–ಅಮ್ಮಾ ।
ನಾನಿನ್ನ ಮಗನಲ್ಲವಂತೆ ॥
ಧೇನು ಕಾಯುವರಿಲ್ಲವೆಂದು ನೀನು ।
ಸಾನುರಾಗದಿ ಸಲಹಿದೆಯಂತೆ ೨

ವಿಷವು ತುಂಬಿದ ಮೊಲೆಯ–ಕೊಟ್ಟ ।
ಅಸುರೆಯ ಸಂಹರಿಸಿದೆನಂತೆ ॥
ಅಸುರನಾದ ಶಕಟನನಾಕ್ಷಣದಲಿ ।
ಶಿಶುವಾಗಲೆ ಒರೆಸಿದೆನಂತೆ ೩

ವತ್ಸಾಸುರನನು ಕೆಡಹಿದೆನಂತೆ ।
ಕಿಚ್ಚನೆಲ್ಲವನು ನುಂಗಿದೆನಂತೆ ॥
ಕಚ್ಚಬಂದ ಕಾಳಿಂಗನಾ ಹೆಡೆ-।
ಚಚ್ಚಿ ತುಳಿದು ಓಡಿದೆನಂತೆ ೪

ಕುಸುಮಗಂಧಿಯರುಡುವ ।
ವಸನ ಕದ್ದು ಓಡಿದೆನಂತೆ ॥
ಹಸುಗೂಸು ಅಲ್ಲ ಇವ ।
ಅಸುರ ಮಗನು ಎಂತೆಂಬುವರೆ ೫

ಒರಳನೆಳೆತಂದು ಮತ್ತಿ-।
ಮರವ ಮುರಿದೋಡಿದೆನಂತೆ ॥
ತರಳೆಯರ ವಸ್ತ್ರವ ಕದ್ದು ।
ತರುವನೇರಿದೆನಂತೆ ೬

ಪರಮ ಗಾಡಿಕಾರನಿವ ।
ಪುರಂದರ ವಿಠಲರಾಯ ॥
ತರುಣಿಯರ ವಂಚಿಸುತ್ತ ।
ಠಕ್ಕಿಸಿ ಪೋದನೆಂತೆಂಬುವರು ೭

## ೬೧

ಆಡಿದನೊ ರಂಗ ಅದ್ಭುತದಿಂದಲಿ ।
ಕಾಳಿಂಗನ ಫಣೆಯಲಿ-ಆಡಿದನೊ ಪ

ಪಾಡಿದವರಿಗೆ ಬೇಡಿದ ವರಗಳ ।
ನೀಡುತಲಿ-ದಯ ಮಾಡುತಲಿ-ನಲಿ-।
ದಾಡುತಲಿ-ಬೆಣ್ಣೆ ಬೇಡುತಲಿ-ಕೃಷ್ಣ ಅ.ಪ

ಅಂಬುರುಹೋದ್ಭವ ಅಖಿಳ ಸುರರು ಕೂಡಿ ।
ಅಂಬರದಲಿ ನಿಂತವರು ಸ್ತುತಿಸೆ ।

ರಂಭೆ–ಊರ್ವಸಿ ರಮಣಿಯರೆಲ್ಲರು ॥
ಚೆಂದದಿಂ ಭರತನಾಟ್ಯವ ನಟಿಸೆ ।
ಝುಂತಕ ತಕಧಿಮಿ ತದಿಗಿಣತೋಂ ಎಂದು ।
ಝುಂಪೆತಾಳದಿ ತುಂಬುರನೊಪ್ಪಿಸೆ ॥
ಧಾಪಮಪಧಸರಿ ಎಂದು ಧ್ವನಿಯಿಂದ ।
ನಾರದ ತುಂಬುರು ಗಾನವ ಮಾಡಲು ।
ನಂದಿಯು ಚೆಂದದಿ ಮದ್ದಲೆ ಹಾಕಲು ೧

ಫಣಿಯ ಮೆಟ್ಟಿ ಬಾಲವ ಕೈಯಲಿ ಪಿಡಿದು ।
ಫಣಫಣಿಸುತ ನಾಟ್ಯವನಾಡೆ ।
ದಿನಪಮಂಡಲದಂತೆ ಪೊಳೆಯುವ ಮುಖದೊಳು ॥
ಚಲಿಸುತ ನೀಲಕೇಶಗಳಾಡೆ ।
ಕಾಲಲಂದಿಗೆ ಗೆಜ್ಜೆ ಘುಲುಘುಲು ಘುಲುಘುಲು ।
ಘುಲುರೆಂದು ಉಡಿಗೆಜ್ಜೆ ಗಂಟೆಗಳಾಡೆ ॥
ದುಷ್ಟ ಕಾಳಿಂಗನ ಮೆಟ್ಟಿ ಭರದಿಂದ ।
ಪುಟ್ಟ ಪಾದವನು ಇಟ್ಟ ಶ್ರೀಕೃಷ್ಣನು ।
ಮೆಟ್ಟಿದ ತದ್ಧಿಮಿ ತಧಿಗಣತೋಂ ಎಂದು ೨

ಸುರರು ಪುಷ್ಪದ ವೃಷ್ಟಿಯ ಕರೆಯಲು ।
ಸುದತಿಯರೆಲ್ಲರು ಪಾಡಲು ।
ನಾಗಕನ್ನೆಯರು ನಾಥನ ಬೇಡಲು ।
ನಾನಾವಿಧ ಸ್ತುತಿ ಮಾಡಲು ॥
ರಕ್ಕಸರೆಲ್ಲರು ಕಕ್ಕಸವನೆ ಕಂಡು ।
ದಿಕ್ಕಿದಿಕ್ಕುಗಳಿಗೋಡಲು ॥
ಚಿಕ್ಕವನಿವನಲ್ಲ ಪುರಂದರವಿಠಲ ।
ವೆಂಕಟರಮಣನ ಬೇಗ ಯಶೋದೆ ।
ಬಿಂಕದೊಳೆತ್ತಿ ಮುದ್ದಾಡೆ ಶ್ರೀಕೃಷ್ಣನ ೩

## ೬೨

ಆರು ಬಂದವರವ್ವ ಆರವನಲ್ಲದೆ ।
ಮಾರಜನಕನಾದ ಶೌರಿಯಲ್ಲದೆ ಮತ್ತೆ ಪ

ಹೆಜ್ಜೆಗಳಿಡುತ ಕಾಣಿಸದಂತಿರೆ ಮೃದು–।
ಗೆಜ್ಜೆಯ ದನಿ ಕೇಳಿಬರುತಲಿರೆ ॥
ವಜ್ರಮಾಣಿಕಹಾರ ಹರಿದು ನೆಲಕೆ ಬಿದ್ದು ।
ಮಜ್ಜಿಗೆಯೊಳಗಿನ ಬೆಣ್ಣೆ ಕಾಣೆನಮ್ಮ ೧

ಕೊಂಬು ಕೊಳಲು ತುತ್ತೂರಿ ಊದುತಲಿಕ್ಕು
ಇಂಬು ಕಸ್ತುರಿ ಪರಿಮಳ ಸೂಸುತ ॥
ಪೊಂಬಟ್ಟೆ ಚೆಲ್ಲಣ ಸೋಸಿದ ಮೊಸರಿನ ।
ಕುಂಭ ಒಡೆದು ಕೆಸರಾಗಿದೆಯಮ್ಮ ೨

ಮಿಂಚಿನಂದದಿ ಹೊಳೆಯುತ ಬದಿಯಲಿದ್ದ ।
ಸಂಚಿತಾರ್ಥಗಳೆಲ್ಲ ಸೂರಾಡಿದ ॥
ವಂಚನೆಯಿಲ್ಲದೆ ಭಕ್ತರ ಸಲುಹಿದ ।
ಸಂಚುಕಾರ ಪುರಂದರವಿಠಲನಲ್ಲದೆ ೩

## ೬೩

ಆರೇ ರಂಗನ ಆರೇ ಕೃಷ್ಣನ ।
ಆರೇ ರಂಗನ ಕರೆಯಬಂದವರು ಪ

ಗೋಪಾಲಕೃಷ್ಣನ ಪಾಪವಿನಾಶನ ।
ಈ ಪರಿಯಿಂದಲಿ ಕರೆಯ ಬಂದವರು ೧

ವೇಣುವಿನೋದನ ಪ್ರಾಣಪ್ರಿಯನ ।
ಜಾಣೆಯರರಸನ ಕರೆಯ ಬಂದವರು ೨

ಕರಿರಾಜವರದನ ಪರಮಪುರುಷನ ।
ಪುರಂದರವಿಠಲನ ಕರೆಯ ಬಂದವರು ೩

## ೬೪

ಇವನ ಹಿಡಿದುಕೊಂಡು ಹೋಗೆಲೊ ಜೋಗಿ ।
ಇವ ನಮ್ಮ ಮಾತು ಕೇಳದೆ ಪುಂಡನಾದನು ಪ

ಆಡುತಾಡುತ ಬಂದು ಮಡುವಿನೊಳ್ ಮುಳುಗಿದ ।
ಬೇಡವೆಂದರೆ ಬೆಟ್ಟ ಬೆನ್ನಲಿ ನೆಗಹಿದ ॥
ಓಡುತೋಡುತ ಬಂದು ದಾಡೆಯಿಂದ ಸೀಳ್ವ ।
ನೋಡ ಹೋದರೆ ಕಣ್ಣ ತರೆದಂಜಿಸುವ ೧

ಹಲ್ಲಲಿ ಬ್ರಾಹ್ಮಣನ ಕಣ್ಣು ಕುಕ್ಕಿದ ಬುದ್ಧಿ ॥
ಅಲ್ಲವೆಂದರೆ ಕೊಡಲಿಯ ಪಿಡಿದೆತ್ತಿದ ॥
ಬಿಲ್ಲನು ಎಡದ ಕೈಯಿಂದಲಿ ಎತ್ತಿದ ।
ಬಲ್ಲಿದ ಮಾವನ ಶಿರವನರಿದು ಬಂದ ೨

ಬತ್ತಲೆ ಕುದುರೆಯ ಹತ್ತಬೇಡೆಂದರೆ ।
ಹತ್ತುವ ಶ್ರೀಕೃಷ್ಣ ಚೆಂದದಿಂದ ॥
ಭಕ್ತವತ್ಸಲ ನಮ್ಮ ಪುರಂದರವಿಠಲನ ।
ಅತ್ತ ಹಿಡಿದು ಕೊಂಡು ಹೋಗಯ್ಯ ಜೋಗಿ ೩

## ೬೫

ಎಂತಹ ಸಣ್ಣವನೆ–ನಿನ್ನ ಮಗನಂತಹರೆಲ್ಲಿಲ್ಲವೆ ।
ಹೊಂತಕಾರಿ ಬಲವಂತರಿಗಧಿಕನು ಪ

ತರಳನಂತಿಪ್ಪನು ತರಳೆಯರೊಡನಾಡುವ ।
ಕಿರುಬೆರಳುಗುರಲಿ ಗಿರಿಯನೆತ್ತಿದವ ೧

ಕಾಳಿಯ ಸರ್ಪನ ಕಾಲಲ್ಲಿ ತುಳಿದವ ।
ಪಲಾಯನ ಮಾಡಿ ಕಾಲಯವನನ ಸುಟ್ಟ ೨

ಕಿಚ್ಚು ಪಾನವ ಮಾಡಿ ಅಚ್ಚರಿ ತೋರಿದ ।
ರಚ್ಚೆ ಮಾಡುವಿರೆಂದು ಮುಚ್ಚಿಕೊಂಬುವಿಯಲ್ಲೆ ೩

ಬಾಯಿ ತೆರೆದನಲ್ಲೆ ನೀನಂಜುವಂದದಿ ।
ಆ ಯಮಳಾರ್ಜುನರಾಯಾಸಬಡಿಸಿದ ೪

ದಿಟ್ಟತನದಿ ಮೊಲೆಗೊಟ್ಟವಳನು ಕೊಂದ ।
ಪುಟ್ಟ ಪುರಂದರವಿಠಲರಾಯನು ೫

## ೬೬

ಎತ್ತಿಕೊಳ್ಳೆ ಗೋಪೀ ರಂಗನ ।
ರಚ್ಚೆ ಮಾಧವರಾಯ ನಿಲುವನಲ್ಲ ಪ

ಕರ್ಣದ ಮಾಗಾಯಿ ಕದಪಲಿ ಹೊಳೆಯುತ ।
ಎಣ್ಣೆಮಣಿಯ ಕೊರಳಲಿ ಹುಲಿಯುಗುರು ॥
ಚಿನ್ನದ ಬಾಯೊಳು ಅಮೃತವ ಸುರಿಯುತ್ತ ।
ಬೆಣ್ಣೆ–ಹಾಲನುಂಬುವೆನೆಂದು ಬಂದ ೧

ಅಂಬೆಗಾಲಿಕ್ಕುತ ತುಂಬಿಯೊಲ್ ಮೊರೆಯುತ—।
[ಚೆಂದದ] ಅರಳೆಲೆ ನಲಿದಾಡುತ ॥
ಬಂದು ತರಳನಂದದಿ ಬಾಯ ಬಿಡುತ ಮು—।
ಕುಂದನು ಮೊಲೆಯನುಂಬುವೆನೆಂದು ಬಂದ ೨

ಬಿಗಿದ ಪಟ್ಟೆಯಲಿ ಬಾಯ್ತಲೆಯು ಹೊಳೆಯುತಿರೆ ।
ಚಿಗುಟುತ ಎಡದ ಕೈಯಲಿ ಕುಚವ ॥
ನಗುತ ನಾಚುತ ಗೋಪಿಯ ಮುಖ ನೋಡುತ ।
ಮಿಗೆ ನಲಿನಲಿದುಂಡ ಪುರಂದರವಿಠಲ ೩

## ೬೭

ಎಂಥ ಗಾಡಿಕಾರನೆ–ಕೃಷ್ಣಯ್ಯ ಇ – ।
ನ್ನೆಂಥ ಗಾಡಿಕಾರನೆ? ಪ

ಕಂತುಪಿತನು ವೇಲಾಪುರದ ಚೆನ್ನಿಗರಾಯ ಅ.ಪ

ಬಿಂಕದಿಂದಲಿ ಕೊಳಲೂದುವ ಕೈಗೆ ।
ಪಂಕಜಮುಖಿಯರ ಕುಣಿಸುವ ಕೈಗೆ ೨

ದಿಟ್ಟತನದಲಿ ಬೆಟ್ಟವೆತ್ತಿದ ಕೈಗೆ ।
ಸೃಷ್ಟಿಯ ದಾನವ ಬೇಡಿದ ಕೈಗೆ ॥
ದುಷ್ಟಭೂಪರನೆಲ್ಲ ಮಡುಹಿದ ಕೈಗೆ ।
ಕೆಟ್ಟ ದಾನವರನು ಸದೆಬಡಿದ ಕೈಗೆ ೩

ಕಾಳಿಯ ಮಡುವನು ಕಲಕಿದ ಕೈಗೆ ।
ಸೋಳಸಾಸಿರ ಗೋಪಿಯರಾಳಿದ ಕೈಗೆ ॥
ಮೇಳದ ಭಕ್ತರುದ್ಧರಿಸುವ ಕೈಗೆ ।
ಏಳು ಗೂಳಿಯ ಗೆದ್ದ ಯದುಪನ ಕೈಗೆ ೪

ಬಿಲ್ಲು – ಬಾಣಗಳನು ಪಿಡಿದಂಥ ಕೈಗೆ ।
ಮಲ್ಲ ಸಾಧನೆಯನು ಮಾಡಿದ ಕೈಗೆ ॥
ಎಲ್ಲ ದೇವರದೇವ ರಂಗನ ಕೈಗೆ ।
ಬಲ್ಲಿದ ಪುರಂದರವಿಠಲನ ಕೈಗೆ ೫

## ೧೫೫

ಹಿಂದಿನ ಬವಣೆಗಳೆಲ್ಲ ಆಗಲೆ ಮರೆದೆಯೇನೊ ।
ಇಂದು ಬಂದ ಭಾಗ್ಯವು ನಿಜವೆ ವೆಂಕಟತಂದೆ? ಪ

ತಲೆಗೆ ಹುಲಗಲ ಹೂವ ಕಟ್ಟಿ ತುರುಗಳ ಕಾಯುತಲಿದ್ದೆ ।
ಹಲವು ರತ್ನದ ಮುಕುಟ ಈಗ ಇಟ್ಟಿಹೆನೆಂದು ೧

ಒಪ್ಪಿಡಿ ಅವಲಕ್ಕಿಯನು ಒಪ್ಪದಿಂದ ಸವಿದೇ ಸವಿದೆ ।
ತಪ್ಪದೆ ಪಂಚಾಮೃತ ಉಂಡು ಸೊಕ್ಕಿದೆನೆಂದು ೨

ಭಾಗ್ಯವು ಬಂದರೆ ಭಕ್ತರನು ಮರೆವರೆ ಸೌ–।
ಭಾಗ್ಯವಂತ ನೀನು ಪುರಂದರ ವಿಠಲ ೩

## ೧೫೬

ಹೇಳಬಾರದೆ ಬುದ್ಧಿಯ – ಮಗನ ಊರ–।
ಗೂಳಿಯ ಮಾಡಿದೇನೆ ? ಪ

ಮೇಳದಿ ಓರಗೆಯವರ ಕೂಡಿಕೊಂಡು ।
ಹಾಳು ಮಾಡುತಾನೆ ಗೋವಳಗೇರಿಯ ಅ.ಪ

ಅಟ್ಟದ ಮೇಲಿಟ್ಟಿಹ – ಚೆಟ್ಟಿಗೆ ಹಾಲು ।
ಬಟ್ಟನಿಕ್ಕಿ ಚೀಪುವ ॥
ದುಷ್ಟತನವ ಮಾಡಬೇಡ ಅಯ್ಯಾ ಎನೆ ।
ಕಷ್ಟವೇನೆಂಬೆ ಮುದ್ದಿಟ್ಟು ಓಡಿ ಪೋದ ೧

ಮೊಸರ ಮಥಿಸುತಿರಲು – ಬಂದು ಕುಳಿತ ।
ಹಸುಗೂಸು ಎನುತಿದ್ದೆನೆ ॥
ಕುಸುಮನಾಭನು ತನ್ನ ವಶವಾಗು ಎನುತಲಿ ।
ವಸನತೆಗೆದು ಮೊಲೆ ಪಿಡಿದು ಹೋದ ಮೇಲೆ ೨

ಬೆಣ್ಣೆಯ ಕಂಡರಂತೂ – ಅದರರೂಪ ।
ಕಣ್ಣಿಗೆ ತೋರನಲ್ಲೆ ॥
ಸಣ್ಣವನೆಂದು ಬಗೆದು ನಾ ಕರೆದರೆ ।
ಬಣ್ಣದ ಮಾತಾಡಿ ಬಾ ಎಂದು ಕರೆವನು ೩

ಉಡುವ ಸೀರೆಯ ಕಳೆದು – ತಡಿಯಲಿಟ್ಟು ।
ಮಡುವಿನೊಳ್ ಮೈದೊಳೆಯೆ ॥
ದಡದಡ ಬಂದೊಯ್ದು ಕಡಹದ ಮರವೇರಿ ।
ಕೊಡು ಕೃಷ್ಣ ಎನುತಿರೆ ಪಿಡಿ ಜೋಡು ಕೈಯೆಂಬ ೪

ಎಷ್ಟು ಹೇಳಲಿ ನಿನಗೆ – ಯಶೋದೆ ಒಂ–।
ದಿಷ್ಟು ಕರುಣವಿಲ್ಲವೆ ।
ಸೃಷ್ಟಿಗೊಡೆಯ ನಮ್ಮ ಪುರಂದರ ವಿಠಲನ್ನ
ಎಷ್ಟು ಹೇಳಲಿ ಆದ್ದಷ್ಟು ನಿನ ಮುಂದೆ ೫

## ೧೫೭

ಹೊರ ಹೋಗಿ ಆಡದಿರೊ ಹರಿಯೆ–।
ಎನ್ನ ದೊರೆಯೆ ಪ

ಮನೆಯೊಳಗಾಡುವುದೆ ಚೆಂದ – ನೆರೆ–।
ಮನೆಗಳಿಗೇಕೆ ಪೋಗುವೆಯೊ ಮುಕುಂದ ॥
ವನಿತೆಯರು ಮೋಹದಿಂದ – ನಿನ್ನ ।
ಮನವಪಹರಿಸಿಕೊಂಬುವರೋ ಗೋವಿಂದ ೧

ಏನು ಬೇಡಿದರೂ ನಾ ಕೊಡುವೆ–ಕೆನೆ–।
ಬೆಣ್ಣೆ ಕಜ್ಜಾಯವ ಕೈಯೊಳಗಿಡುವೆ ॥
ನಿನ್ನ ಗುಣಗಳನು ಕೊಂಡಾಡುವೆ – ನಿನಗೆ ।
ಚಿನ್ನ ರನ್ನದ ಅಲಂಕಾರಗಳಿಡುವೆ ೨

ಹೊಲಸು ಮೈಯವನೆನ್ನುವರೊ–ದೊಡ್ಡ ।
ಕುಲಗಿರಿಯನ್ನು ಪೊತ್ತವನೆನ್ನುವರೊ ॥
ಬಲುಕೇಶದವನೆನ್ನುವರೊ–ಆ ।
ಎಳೆಯನನೆತ್ತಿದ ಕುರೂಪಿಯೆಂಬುವರೊ ೩

ಭಿಕ್ಷೆ ಬೇಡಿದೆ ಎಂಬುವರೊ–ಭೂಮಿ ।
ರಕ್ಷಿಪ ರಾಯರ ಕಡಿದೆಯೆಂಬುವರೊ ॥
ಲಕ್ಷ್ಮಿಯ ಕಳೆದೆಯೆಂಬುವರೊ ವೈ–।
ಲಕ್ಷಣ ಬೆಣ್ಣೆಯ ಕದ್ದೆಯೆಂಬುವರೊ ೪

ಮಾನ ಬಿಟ್ಟವನೆನ್ನುವರೊ–ಮಹಾ ।
ಹೀನರ ಬೆನ್ನಟ್ಟಿ ಹೋದನೆಂಬುವರೊ ॥
ದಾನವವೈರಿಯೆಂಬುವರೊ–ಸುರ–।
ರಾನತ ಪುರಂದರವಿಠಲನೆಂಬುವರೊ ೫

# ದೇವದೇವತೆಗಳ ಸ್ತುತಿ

## i. ತಾರತಮ್ಯೋಕ್ತ ಪದಗಳು

### ೧೫೮

ಭಳಿಭಳಿರೆ ಎನ್ನ ಸುಖವೆಂಬುದೇ ಸುಖವು
ಹಲಕಾಲಕಿದೆ ಇರಲಿ ಕಾವೇರಿ ರಂಗ ಪ

ತಂದೆ ನೀನೇ ಕೃಷ್ಣ ತಾಯಿ ಇಂದಿರೆದೇವಿ
ಮಂದಜಾಸನನೆನಗೆ ಹಿರಿಯಣ್ಣನು ॥
ಇಂದು ಶ್ರೀ ಸರಸ್ವತೀದೇವಿ ಅತ್ತಿಗೆಯು
ಎಂದೆಂದಿಗೂ ವಾಯುದೇವರೇ ಗುರುವು ೧

ಗುರುಪತ್ನಿ ಶ್ರೀಭಾರತಿಯು ನೋಡೆ ಮೇಲಾಗಿ
ಗರುಡಾಹಿ ರುದ್ರರಣ್ಣನ ಮಕ್ಕಳು ॥
ಸುರರು ಸನಕಾದಿಗಳು ಪರಮಬಾಂಧವರೆನಗೆ
ಸ್ಥಿರವಾದ ವೈಕುಂಠವೆನಗೆ ಮಂದಿರವು ೨

ನಿನ್ನ ಪಾದಾಂಬುಜವ ಭಜಿಸುವುದೆ ಸೌಭಾಗ್ಯ
ನಿನ್ನ ನಿರ್ಮಾಲ್ಯಗಳೆ ಭೋಗದ್ರವ್ಯ ॥
ನಿನ್ನ ಕಥೆ ಕೇಳುವುದೆ ಮಂಗಳಸುವಾದ್ಯಗಳು
ನಿನ್ನಂಥ ಅರಸೆನಗೆ ಪುರಂದರವಿಠಲ ೩

### ೧೫೯

ಶ್ರೀಪತಿಯು ನಮಗೆ ಸಂಪದವೀಯಲಿ ವಾ-
ಣೀಪತಿಯು ನಮಗೆ ದೀರ್ಘಾಯು ಕೊಡಲಿ ಪ

ಸುರರ ಗಣವನು ಪೊರೆಯೆ ವಿಷವ ಕಂಠದಲಿಟ್ಟ
ಹರ ನಿತ್ಯ ನಮಗೆ ಸಹಾಯಕನಾಗಲಿ ॥

ನರರೊಳುನ್ನತವಾದ ನಿತ್ಯಾಭೋಗಂಗಳನು
ಪುರುಹೂತ ಪೂರ್ಣ ಮಾಡಿಸಲಿ ನಮಗೆ ೧

ವಿನುತಸಿದ್ಧಿಪ್ರದನು ವಿಘ್ನೇಶ ದಯದಿಂದ
ನೆನದ ಕಾರ್ಯಗಳೆಲ್ಲ ನೆರವೇರಿಸಲಿ ॥
ದಿನ ದಿನದಿ ಅಶ್ವಿನಿಗಳಾಪತ್ತುಗಳ ಕಳೆದು
ಮನಕೆ ಹರುಷವನಿತ್ತು ಮನ್ನಿಸಲಿ ಬಿಡದೆ ೨

ನಿರುತ ಸುಜ್ಞಾನವನು ಈವ ಮಧ್ವರಾಯ
ಗುರುಗಳಾಶೀರ್ವಾದ ನಮಗಾಗಲಿ ॥
ಪುರಂದರ ವಿಠಲನ ಕರುಣದಿಂದಲಿ ಸಕಲ
ಸುರರೊಲುಮೆ ನಮಗೆ ಸುಸ್ಥಿರವಾಗಲಿ ೩

## ೧೬೦

ಸತ್ಯಜಗತಿದು ಪಂಚಭೇದವು ನಿತ್ಯ ಶ್ರೀ ಗೋವಿಂದನ
ಕೃತ್ಯ ತಿಳಿದು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ ಪ

ಜೀವ ಈಶಗೆ ಭೇದ ಸರ್ವತ್ರ ಜೀವಜೀವಕೆ ಭೇದವು
ಜೀವ ಜಡರೊಳು ಭೇದ ಜಡರೊಳು ಭೇದ ಜಡಪರಮಾತ್ಮಗೆ ೧

ಮಾನುಷೋತ್ತಮರಧಿಕ ಕ್ಷಿತಿಪರು ಮನುಜ ದೇವಗಂಧರ್ವರು
ಜಾನಪಿತರಜಾನಜ ಕರ್ಮಜದರ್ಾನವಾರಿ ತತ್ವೇಶರು ೨

ಗಣಪಮಿತ್ರರು ಸಪ್ತ ಋಷಿಗಳು ವಹ್ನಿ ನಾರದವರುಣರು
ಇನಜಗೆ ಸಮಚಂದ್ರ ಸೂರ್ಯರು
ಮನುಸುತೆಯು ಹೆಚ್ಚುಪ್ರವಹನು ೩

ದಕ್ಷಸಮ ಅನಿರುದ್ಧ ಗುರುಶಚಿ ರತಿ ಸ್ವಾಯಂಭುವರಾರ್ವರು
ಕಕ್ಷಪ್ರಾಣನಿಗಿಂತ ಕಾಮನು ಕಿಂಚಿದಧಿಕನು ಇಂದ್ರನು ೪

ದೇವ ಇಂದ್ರನಿಗಧಿಕ ಮಹರುದ್ರ ದೇವರಿಗೆ ಸಮ ಗರುಡನು
ಕೇವಲವು ಈ ಶೇಷ ರುದ್ರರು ದೇವಿ ಹೆಚ್ಚು ಸರಸ್ವತೀ ೫

ವಾಯುವಿಗೆ ಸಮರಿಲ್ಲ ಜಗದೊಳು ವಾಯುದೇವರೆ ಬ್ರಹ್ಮರು
ವಾಯು ಮುಕ್ತಗೆ ಕೋಟಿಗುಣದಿಂದಧಿಕ ಶಕ್ತಳು ಶ್ರೀರಮಾ ೬

ಅನಂತ ಗುಣದಿಂ ಲಕುಮಿಗಧಿಕನು ಶ್ರೀಪುರಂದರವಿಠಲನು
ಘನರು ಸಮರೂ ಇಲ್ಲ ಜಗದೊಳು ಹನುಮಹೃತ್ಪದ್ಮವಾಸಗೆ ೭

## ii. ಲಕ್ಷ್ಮೀದೇವಿ ಸ್ತುತಿ

### ೧೬೧

ಆರಿಗೆ ವಧುವಾದೆ – ಅಂಬುಜಾಕ್ಷಿ ।
ಕ್ಷೀರಾಬ್ಧಿ ಕನ್ನಿಕೆ – ಶ್ರೀ ಮಹಾಲಕುಮೀ ಪ

ಶರಧಿ ಬಂಧನ ರಾಮಚಂದ್ರ ಮೂರುತಿಗೊ ।
ಪರಮಾತ್ಮ ಸಿರಿಯನಂತಪದ್ಮನಾಭನಿಗೋ ॥
ಸರಸಿಜಭವ ಜನಾರ್ದನಮೂರುತಿಗೋ ।
ಎರಡು ಹೊಳೆಯ ರಂಗಪಟ್ಟಣವಾಸಗೊ ೧

ಚೆಲುವ ಬೇಲೂರು ಚೆನ್ನಿಗರಾಯನಿಗೊ ।
ಕೆಳದಿ ಹೇಳುಡುಪಿಯ ಕೃಷ್ಣರಾಯನಿಗೊ ॥
ಇಳೆಯೊಳು ಪಂಢರಪುರ ವಿಠಲೇಶಗೊ ॥
ನಳಿನಾಕ್ಷಿ ಹೇಳು ಬದರೀನಾರಾಯಣನಿಗೊ ೨

ಮಲಯಜಗಂಧಿ, ಬಿಂದುಮಾಧವರಾಯಗೊ ।
ಸುಲಭದೇವ ಪುರುಷೋತ್ತಮಗೊ ॥
ಫಲದಾಯಕ ನಿತ್ಯ ಮಂಗಳನಾಯಕಗೊ ।
ಚೆಲುವೆ ನಾಚದೆ ಪೇಳು ಶ್ರೀ ವೆಂಕಟೇಶಗೋ ೩

ವಾಸವಾರ್ಚಿತ ಕಂಚೀವರದರಾಜಮೂರುತಿಗೊ ।
ಆ ಸುರವಂದ್ಯ ಶ್ರೀಮುಷ್ಣದಾದಿವರಹನಿಗೊ ॥
ಶೇಷಶಾಯಿಯಾದ ಶ್ರೀ ರಂಗನಾಯಕಗೊ ।
ಸಾಸಿರನಾಮದೊಡೆಯ ಅಳಗಿರಿಯೀಶಗೋ ೪

ಶರಣಾಗತರನು ಪೊರೆವ ಶಾರ್ಙ್ಗಪಾಣಿಗೊ ।
ವರಗಳನೀವ ಶ್ರೀನಿವಾಸ ಮೂರುತಿಗೋ ।
ಕುರುಕುಲಾಂತಕ ರಾಜಗೋಪಾಲ ಮೂರುತಿಗೊ ।
ಸ್ಥಿರವಾದ ಪುರಂದರವಿಠಲರಾಯನಿಗೊ ೫

## ೧೬೨

ಈಗಲುಪ್ಪವಡಿಸಿದಳು ಇಂದಿರಾದೇವಿ
ಯೋಗರತಿ ನಿದ್ರೆ ತಿಳಿದು ಪ

ಕಡೆಗಣ್ಣ ಕಪ್ಪ ಅಂಗೈಯಿಂದಲೊರಸುತ
ಸಡಲಿದ ತುರುಬ ಬಿಗಿದು ಕಟ್ಟುತ ॥
ನಡುವಿನೊಡ್ಯಾಣವ ನಟನೆಯಿಂ ತಿರುವುತ
ಕಡಗ ಕಂಕಣ ಬಳೆ ಕರದಿ ಘಲ್ಲೆನುತ ೧

ಕೂರುಗುರ ಗಾಯವನು ಕೊನೆ ಬೆರಳಲೊತ್ತುತ
ಹಾರದ ತೊಡಕನು ಬಿಚ್ಚಿ ಹಾಕುತ ॥
ಜಾರಿದ ಜಾಜಿದಂಡೆಸರವನೀಡಾಡುತ
ಮೋರೆಯ ಕಿರುಬೆವರ ಮುಂಜೆರಗಿಲೊರಸುತ ೨

ಕಕ್ಕಸ ಕುಚದೊಳಿರ್ದ ಕಸ್ತುರಿಯನೊರಸುತ
ಚಕ್ಕನೆ ಕನ್ನಡಿಯೊಳು ಮುಖ ನೋಡುತ ॥
ಅಕ್ಕರದ ತಾಂಬೂಲ ಸರಸದಿಂದುಗುಳುತ
ಚೊಕ್ಕ ಪುರಂದರ ವಿಠಲನ ನೋಡಿ ನಗುತ ೩

## ೧೬೩

ಏನು ಧನ್ಯಳೋ – ಲಕುಮಿ – ಎಂಥ ಮಾನ್ಯಳೋ ಪ

ಸಾನುರಾಗದಿಂದ ಹರಿಯ ತಾನೆ ಸೇವೆ ಮಾಡುತಿಹಳೊ ಅ.ಪ

ಕೋಟಿ ಕೋಟಿ ಭೃತ್ಯರಿರಲು ಹಾಟಕಾಂಬರನ ಸೇವೆ ।
ಸಾಟಿಯಿಲ್ಲದೆ ಪೂರ್ಣಗುಣಳು ಸರ್ವಕಾಲ ಮಾಡುತಿಹಳು ೧

ಛತ್ರ ಚಾಮರ ವ್ಯಜನ ಪರ್ಯಂಕ ಪಾತ್ರರೂಪದಲ್ಲಿ ನಿಂತು ।
ಚಿತ್ರಚರಿತನಾದ ಹರಿಯ ನಿತ್ಯಸೇವೆ ಮಾಡುತಿಹಳು ೨

ಸರುವಸ್ಥಳದಿ ವ್ಯಾಪ್ತನಾದ । ಸರುವದೋಷರಹಿತನಾದ ।
ಗರುಡಗಮನನಾದ ಪುರಂದರವಿಠಲನ ಸೇವಿಸುವಳೋ ೩

## ೧೬೪

ಏನೆಂದಳಯ್ಯ ಸೀತೆ ।
ನಿನಗೇನ ಮಾಡಿದಳೊ ಪ್ರೀತೆ ಪ

ದಾನವನ ಪುರದೊಳಗೆ ದಾರಿಯನು ನೋಡುತಲೆ ।
ಧ್ಯಾನವನು ಮಾಡುತಿಹಳೊ ಹನುಮಾ ಅ.ಪ

ಎಲ್ಲಿಂದ ಬಂದೆ ಹನುಮಾ – ನೀಯೆನ್ನ –
ಕೇಳುಸೊಲ್ಲೆನ್ನ ಪ್ರೇಮ ॥
ವಲ್ಲಭನ ನೆನೆದರೆ ನಿಮಿಷ ಯುಗವಾಗುತಿದೆ
ನಿಲ್ಲಲಾರೆನು ಎಂದಳೊ ಹನುಮಾ ೧

ದೇವರಾಯನ ಪಾದವ – ಎಲೆ ಕಪಿಯೆ –
ದಾವಪರಿಯಲಿ ಕಾಂಬೆನೊ ॥
ರಾವಣನ ಶಿರವರಿದು ಲಂಕಪಟ್ಟಣವನೆಲ್ಲ ।
ಹವನವಮಾಡಿಸು ಎಂದಳೊ ಹನುಮಾ ॥ ೨

ಅಂಜನಾತನಯ ಕೇಳೊ – ನೀ ಹೋಗಿ –
ಕಂಜನಾಭನಿಗೆ ಪೇಳೊ ॥
ಕುಂಜರವಕಾಯ್ದ ಶ್ರೀಪುರಂದರವಿಠಲನ ।
ಪಂಜರದ ಗಿಣಿಯೆಂದಳೊ ಹನುಮಾ ೩

## ೧೬೫

ಭಾಗ್ಯದ ಲಕ್ಷ್ಮೀ ಬಾರಮ್ಮಾ – ನಮ್ಮಮ್ಮಾ ನೀ ಸೌ–
ಭಾಗ್ಯದ ಲಕ್ಷ್ಮೀ ಬಾರಮ್ಮಾ ಪ

ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ ।
ಗೆಜ್ಜೆಯ ಕಾಲಿನ ಧ್ವನಿಯ ಮಾಡುತ ॥
ಸಜ್ಜನ ಸಾಧು ಪೂಜೆಯ ವೇಳೆಗೆ ।
ಮಜ್ಜಿಗೆಯೊಳಗಿನ ಬೆಣ್ಣೆಯಂತೆ ೧

ಕನಕವೃಷ್ಟಿಯ ಕರೆಯುತ ಬಾರೆ ।
ಮನಕೆ ಮತಿಯ ಸಿದ್ಧಿಯ ತೋರೆ ॥
ದಿನಕರ ಕೋಟಿ ತೇಜದಿ ಹೊಳೆಯುತ ।
ಜನಕರಾಜನ ಕುಮಾರಿ ಸೀತೆ ೨

ಸಂಖ್ಯೆಯಿಲ್ಲದಾ ಭಾಗ್ಯವ ಕೊಟ್ಟು ।
ಕಂಕಣ ಕೈಯಾ ತಿರುವುತ ಬಾರೆ ॥
ಕುಂಕುಮಾಂಕಿತೇ ಪಂಕಜಲೋಚನೆ ।
ವೆಂಕಟರಾಯನ ಮೋಹದ ರಾಣಿ ೩

ಅತ್ತಿತ್ತಗಲದೆ ಭಕ್ತರ ಮನೆಯಲಿ ।
ನಿತ್ಯಮಂಗಲವು ನಿತ್ಯ ಮಹೋತ್ಸವ ॥
ಸತ್ಯವ ತೋರುವ ಸಜ್ಜನರಿಗೆ ನೀ ।
ಚಿತ್ತದಿ ಹೊಳೆಯುವ ಪುತ್ಥಳಿಗೊಂಬೆ ೪

## ೧೭೧

ಎಂಥ ಬಲವಂತನೊ-ಕುಂತಿಯ ಸಂಜಾತನೋ ।
ಭಾರತಿಗೆ ಕಾಂತನೊ-ನಿತ್ಯ ಶ್ರೀಮಂತನೋ ಪ

ರಾಮಚಂದ್ರನ ಪ್ರಾಣನೊ-ಅಸುರ ಹೃದಯ ಬಾಣನೊ ।
ಖಳರ ಗಂಟಲ ಗಾಣನೊ-ಜಗದೊಳಗೆ ಪ್ರವೀಣನೊ ೧

ಬಂಡಿಯನ್ನವನುಂಡನೊ-ಬಕನ ಪ್ರಾಣವ ಕೊಂಡನೊ ।
ಭೀಮಪ್ರಚಂಡನೊ-ದ್ರೌಪದಿಗೆ ಗಂಡನೊ ೨

ಕುಂತಿಯ ಕಂದನೊ ಸೌಗಂಧಿಕವ ತಂದನೋ ।
ಕುರುಕ್ಷೇತ್ರಕೆ ಬಂದನೊ-ಕೌರವರ ಕೊಂದನೋ ೩

ವೈಷ್ಣವಾಗ್ರಗಣ್ಯನೋ-ಸಂಚಿತಾಗ್ರಪುಣ್ಯನೋ ।
ದೇವವರೇಣ್ಯನೊ-ದೇವ ಶರಣ್ಯನೋ ೪

ಮಧ್ವಶಾಸ್ತ್ರವ ರಚಿಸಿದನೊ-ಸದ್ವೈಷ್ಣವರ ಸಲಹಿದನೊ ।
ಉಡುಪಿ ಕೃಷ್ಣನ ನಿಲಿಸಿದನೊ-ಪುರಂದರ
ವಿಠಲನ ಒಲಿಸಿದನೊ ೫

## ೧೭೨

ಕರವ ಮುಗಿದ-ಮುಖ್ಯಪ್ರಾಣ-ಕರವ ಮುಗಿದ ಪ

ಕರವ ಮುಗಿದ ಶ್ರೀಹರಿಗೆ ತಾನೆದುರಾಗಿ
ದುರುಳರ ಸದೆದು ನೀ ಶರಣರ ಪೊರೆಯೆಂದು ಅ.ಪ

ಜೀವೇಶ್ವರೈಕ್ಯವು ಜಗತು ಮಿಥ್ಯವೆಂದು
ಈ ವಿಧ ಪೇಳುವ ಮಾಯಿಗಳನಳಿಯೆಂದು ೧

ಇಲ್ಲಿ ಮಾತ್ರ ಭೇದ ಅಲ್ಲಿ ಒಂದೇಯೆಂಬ
ಕ್ಷುಲ್ಲಕರನು ಪಿಡಿದು ಹಲ್ಗಳ ಮುರಿಯೆಂದು ೨

ತಾರತಮ್ಯ ಪಂಚಭೇದ ಸತ್ಯವೆಂದು
ಮಾರುತ ಮತ ಪೊಂದಿದವರನು ಪೊರೆಯೆಂದು ೩

ಪರಿಪರಿ ಭಕ್ತರು ಹೃದಯ ಕಮಲದೊಳು
ನಿರುತ ಮಾಡುವ ಪೂಜೆ ನಿನಗರ್ಪಿತವೆಂದು ೪

ಹರಿಯ ಮನೋಗತವರಿತು ಮಾಡುವೆನೆಂದು
ಪುರಂದರ ವಿಠಲನ ಚರಣದ ಬಳಿಯಲ್ಲಿ ೫

## ೧೭೩

ಕೂಸನು ಕಂಡಿರಾ–ಮುಖ್ಯಪ್ರಾಣನ ಕಂಡಿರಾ ಪ

ಅಂಜನೆಯುದರದಲಿ ಹುಟ್ಟಿತು ಕೂಸು
ರಾಮರ ಪಾದಕ್ಕೆರಗಿತು ಕೂಸು ॥
ಸೀತೆಗೆ ಉಂಗುರ ಕೊಟ್ಟಿತು ಕೂಸು
ಲಂಕಾಪುರವನು ಸುಟ್ಟಿತು ಕೂಸು ೧

ಬಂಡಿಯನ್ನವನುಂಡಿತು ಕೂಸು ।
ಬಕನ ಪ್ರಾಣವ ಕೊಂಡಿತು ಕೂಸು ॥
ವಿಷದ ಲಡ್ಡುಗೆಯ ಮೆದ್ದಿತು ಕೂಸು ।
ಮಡದಿಗೆ ಪುಷ್ಪವ ತಂದಿತು ಕೂಸು ೨

ಮಾಯಾವಾದಿಗಳ ಗೆದ್ದಿತು ಕೂಸು ।
ಮಧ್ವಮತವನ್ನುದ್ಧರಿಸಿತು ಕೂಸು ॥
ಮುದ್ದು ಶ್ರೀ ಪುರಂದರ ವಿಠಲನ ದಯದಿಂದ ।
ಉಡುಪಿಯಲ್ಲಿ ಬಂದು ನಿಂತಿತು ಕೂಸು ೩

## ೧೭೪

ಗುರುರಾಯರ ನಂಬಿರೋ–ಮಾರುತಿಯೆಂಬ ಪ

ಗುರುರಾಯರ ನಂಬಿ ಬಿಡದೆ ಯಾವಾಗಲು ।
ದುರಿತವ ಕಳೆದು ಸದ್ಗತಿಯ ಪಡೆವರೆಲ್ಲ ಅ.ಪ

ವನಧಿಯ ಮನೋವೇಗದಿಂದ ಲಂಘಿಸಿ ಮಹಿ–
ತನುಜೆಯ ಶೋಕತಾಪವ ಕಳೆದು ॥
ವನವ ಬೇರೊಡನೆ ಕಿತ್ತೀಡಾಡಿ ಎದುರಾದ
ದನುಜರ ಸದೆದು ಲಂಕೆಯ ತನ್ನ ಸಖಗಿತ್ತ ೧

ಕೌರವ ಬಕ ಹಿಡಿಂಬಕ ಕೀಚಕರೆಂಬ ।
ಕ್ರೂರಸಂತತಿಯೆಲ್ಲ ನುಗ್ಗಲೊತ್ತಿ ॥
ಘೋರ ಪಾತಕಿ ದುಶ್ಶಾಸನ ರಕುತವ
ಹೀರಿ ಮುದದಿ ಮುರವೈರಿಯ ಭಜಿಸಿದ ೨

ಜೀವೇಶರೊಂದೆಂಬ ದುರ್ವಾದಿಗಳ ಕು–
ಭಾವಶಾಸ್ತ್ರಗಳೆಲ್ಲ ತರಿದೋಡಿಸಿ ॥
ಕೋವಿದರಿಗೆ ಸದ್ಭಾಷ್ಯ ಸುಧೆಯನಿತ್ತು
ದೇವ ಪುರಂದರವಿಠಲ ಸೇವಕನಾದ ೩

## ೧೭೫

ಗೆದ್ದೆಯೊ ಹನುಮಂತಾ–ಅಸುರರ
ಒದ್ದೆಯೊ ಬಲವಂತಾ ಪ

ಬದ್ಧಾಂಜಲಿಯಿಂದ ರಘುಪತಿ ಪಾದವ
ಹೃದ್ಯದಿ ಭಜನೆ ಮಾಡುವ ಬುದ್ಧಿವಂತ ಅ.ಪ

ಅಂಜನಿಸುತನೀತ–ಲಂಕಾಪುರದಿ–ಅಕ್ಷಯನ ಕೊಂದಾತ ॥
ಕಂಜಾಕ್ಷಿ ಸೀತೆಯ ಕಂಡು ಮುದ್ರಿಕೆಯಿತ್ತು ।
ಮಂಜುಳವಾರ್ತೆಯ ತಂದ ರಾಮನ ದೂತ ೧

ಈರೇಳು ಜಗದೊಳಗೆ–ಇನ್ನು ಮತ್ತೆ ಯಾರು ಸರಿಯೊ ನಿನಗೆ
ವೀರ ಮಹಾಬಲ ಶೂರ ಪರಾಕ್ರಮ ।
ಧೀರ ಸಮೀರ ಉದಾರ ಗಂಭೀರ ೨

ವಾಂಛಿತ ಫಲವೀವನಾದ ಮುಖ್ಯ– ಪ್ರಾಣ ಮಹಾನುಭಾವ ॥
ಕಿಂಚಿತ್ತು ಕಷ್ಟವ ಪಡಲೀಸ ಭಕ್ತರ್ಗೆ ।
ಪಾಂಚಜನ್ಯ ಪುರಂದರ ವಿಠಲದಾಸ ೩

## ೧೭೬

ಘಟಿಕಾಚಲದಿ ನಿಂತ–ಶ್ರೀ ಹನುಮಂತ ಪ

ಘಟಿಕಾಚಲದಿ ನಿಂತ–ವಟು ಹನುಮಂತ ತನ್ನ
ಪಠನೆಯ ಮಾಡಲುತ್ಕಟದಿ ಪೊರೆವೆನೆಂದು ಅ.ಪ

ಚತುರ ಯುಗದಿ ತಾನು–ಮುಖ್ಯ ಪ್ರಾಣ– ಚತುರ ಮುಖನಯ್ಯನ ।
ಚತುರಮೂರ್ತಿಗಳನು ಚತುರತನದಿ ಭಜಿಸಿ ।
ಚತುರ್ಮುಖವಾಣಿ ಜಗಕೆ ಚತುರ್ವಿಧ ಫಲವ ಕೊಡುತ ೧

ಸರಸಿಜಭವಗೋಸುಗ– ಕರ್ಮಠ ಧೂಮ ವರ ಚಕ್ರತೀರ್ಥಸರ ।
ಮೆರೆವ ಛಲದಿ ನಿತ್ಯ ನರಹರಿಗೆದುರಾಗಿ
ಸ್ಥಿರ ಯೋಗಾಸನದಲಿ ಕರೆದು ವರಗಳ ಕೊಡುತ ೨

ಶಂಖಚಕ್ರವ ಧರಿಸಿ–ಭಕ್ತರ ಮನಃ–ಪಂಕವ ಪರಿಹರಿಸಿ ।
ಪಂಕಜನಾಭ ಶ್ರೀ ಪುರಂದರವಿಠಲನ ।
ಬಿಂಕದ ಸೇವಕ ಸಂಕಟ ಕಳೆಯುತ ೩

## ೧೭೭

ನೆನೆಯಿರೊ ಭಕುತ ಜನರು–ಅನುದಿನವೂ
ನೆನೆಯಿರೊ ಭಕುತ ಜನರುಗಳು ಪ

ಘನಮಹಿಮನ ಸೇವೆಯ ಮಾಡಿದರಾ
ಮನದಲಿ ನೆನೆದ ಅಭೀಷ್ಟವೀವ ಹನುಮಂತ ಅ.ಪ

ಒಂದು ಯುಗದಿ ಹನುಮಂತಾವತಾರನಾಗಿ
ಬಂದು ನೆರೆದಯೋಧ್ಯಾಪುರಕಾ ॥
ಬಂದ ಧೀರನ ನೋಡಿ ಸುಜನರೆಲ್ಲ–ನಂದದಿಂದಲಿ ಪಾಡಿ ೧

ವಾಯು ಕುಮಾರಕ ದ್ವಾಪರದಲಿ ಭೀಮ–
ರಾಯನೆಂದೆನಿಸಿದ ಕೌರವ ಬಲದಿ ॥
ನಾಯಕನಾಗಿ ಬಂದ ದುಶ್ಶಾಸನ–ಕಾಯವಳಿದು ನಿಂದ ೨

ಕಾಯಜಪಿತನ ಮುಂದೆ ಕೌರವರ ತಂದು ರಾಜ–
ಸೂಯಯಾಗವ ಮಾಡಿದ ಬಲವಂತ ॥
ರಾಯರಾಯರ ಧೀರ–ಹನುಮಂತ–ಪ್ರಿಯ ಜನ ಮಂದಾರ ೩

ಗುರು ಮಧ್ವಮುನಿಯಾಗಿ ಹರಿಗತಿಪ್ರಿಯನಾಗಿ–
ಕರುಣಾಕರನಾಗಿ ಶರಣರ ಪೊರೆವ ॥
ಮೆರೆವ ಶ್ರೀ ಹನುಮಂತನ–ದೇವನ ಸ್ಮರಿಸಿರೊ ಗುಣವಂತನ ೪

ಲಂಕಾಪಟ್ಟಣದ ಸಮೀಪ ಸಮುದ್ರ ದಾಟಿ
ಪಂಕಜನಾಭ ಶ್ರೀ ಪುರಂದರವಿಠಲನ
ಲೆಂಕ ರಾವಣನ ಗೆದ್ದ–ಈ ಹನುಮಂತ ಪಂಕಜಮುಖಿಯ ಕಂಡ ೫

## ೧೭೮

ನೆನೆವೆನು ಅನುದಿನ ನಿಮ್ಮ ಮಹಿಮೆಯನು–ಮಧ್ವರಾಯಾ ।
ಸನಕಾದಿ ಮುನಿವೃಂದ ಸೇವಿತ ಪಾದಾಬ್ಜ–ಮಧ್ವರಾಯಾ ಪ

ಕಲಿಮಲದಿ ಜ್ಞಾನ ಕಲುಷಿತವಾಗಲು ಮಧ್ವರಾಯಾ ।
ನಳಿನಾಕ್ಷನಾಜ್ಞೆಯಿಂದಿಳೆಯೊಳಗುದಿಸಿದೆ–ಮಧ್ವರಾಯಾ ೧

ಗೋವಿತ್ತ ವಿಪ್ರಗೆ ನಿರುತ ಮೋಕ್ಷವನಿತ್ತ–ಮಧ್ವರಾಯಾ ।
ಜೀವೇಶರೊಂದೆಂಬ ಮತವ ಭೇದಿಸಿದೆ–ಮಧ್ವರಾಯಾ ೨

ಸೂತ್ರಾರ್ಥಂಗಳನೆಲ್ಲ ವೇತೃಗಳಿಗೆ ತಿಳಿಸಿ–ಮಧ್ವರಾಯಾ ।
ಶಾಸ್ತ್ರದ ತಾತ್ಪರ್ಯ ಪ್ರಕರಣ ರಚಿಸಿದೆ–ಮಧ್ವರಾಯಾ ೩

ಸುಜನರ ಹೃದಯದಿ ಸೇರಿದ್ದ ತಮಸಿಗೆ–ಮಧ್ವರಾಯಾ ।
ನಿಜ ಜ್ಞಾನ ರವಿಯಂತೆ ಕಿರಣವ ಹರಡಿದೆ–ಮಧ್ವರಾಯಾ ೪

ವ್ಯಾಸದೇವರಿಗಭಿವಂದಿಸಿ ಬದರಿಯಲಿ–ಮಧ್ವರಾಯಾ ॥
ಶ್ರೀಶಪುರಂದರವಿಠಲ ದಾಸನಾದೆ–ಮಧ್ವರಾಯಾ ೫

## ೧೭೯

ಪರಮ ಪದವಿಯ ನೀವ ಗುರುಮುಖ್ಯ ಪ್ರಾಣನ
ಧರೆಯೊಳಗುಳ್ಳ ಮಾನವರೆಲ್ಲ ಭಜಿಸಿರೊ ಪ

ಅಂದು ತ್ರೇತೆಯಲಿ ಹನುಮನಾಗಿ ಅವತರಿಸಿ
ಬಂದು ದಾಶರಥಿಯ ಪಾದಕೆರಗಿ ॥
ಸಿಂಧುವನೆ ದಾಟಿ ಮುದ್ರಿಕೆಯಿಕ್ಕು ದಾನವರ
ವೃಂದಪುರ ದಹಿಸಿ ಚೂಡಾಮಣಿಯ ತಂದವನ ೧

ದ್ವಾಪರಯುಗದಲಿ ಭೀಮಸೇನ ನೆನಿಸಿ
ಶ್ರೀಪತಿಯ ಪಾದ ಕಡು ಭಜಕನಾಗಿ
ಕೋಪಾವೇಶದಲಿ ದುಃಶಾಸನನನು ಸೀಳಿ
ಭೂಪರ ಬಲದೊಳಗೆ ಜರೆಜರೆದು ಕರೆದವನ ೨

ಕಲಿಯುಗದಲಿ ತುರೀಯಾಶ್ರಮವನೆ ಧರಿಸಿ
ಕಲುಷದ ಮಾಯಿಗಳನು ಸೋಲಿಸಿ
ಖಿಲವಾದ ಮಧ್ವಮತವನೆ
ನಿಲಿಸಿ ಪುರಂದರವಿಠಲನೆ ಪರದೈವನೆಂದೆನಿಸುವನ * ೩

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

## ೧೮೦

ಮಧ್ವರಾಯರ ನೆನೆದು ಶುದ್ಧರಾಗಿರೊ ।
ಹೊದ್ದಿ ವೈಷ್ಣವ ಮತ ಭವಾಬ್ಧಿ ದಾಟಿರೋ ಪ

ಉದಯದಲಿ ಏಳುವಾಗ ನದಿಯ ಸ್ನಾನ ಮಾಡುವಾಗ
ಒದಗಿ ನಿತ್ಯ ಕರ್ಮಗಳನು ನಡೆಸುವಾಗ ॥
ಹೃದಯದಲಿ ಬೀಜಾಕ್ಷರ ಮಂತ್ರಗಳನು ಜಪಿಸುವಾಗ
ಸದಮಲಾನಂದ ಹನುಮನನ್ನು ನೆನೆಯಿರೊ ೧

ಕಾಮವಿಲ್ಲದ ಹರಿಯ ಪೂಜೆ ವೈಶ್ವದೇವ ಮಾಡುವಾಗ
ಪ್ರೇಮದಿಂದ ವೈಷ್ಣವರು ಅರ್ಚಿಸುವಾಗ ॥
ಆ ಮಹಾ ಭಕ್ಷ್ಯಭೋಜ್ಯ ಆರೋಗಣೆ ಮಾಡುವಾಗ
ನೇಮದಿಂದ ಕೌರವಾಂತಕ ಭೀಮಸೇನನ ನೆನೆಯಿರೊ ೨

ಕರಗಳನ್ನು ತೊಳೆದು ತೀರ್ಥ ತುಳಸೀದಳವ ಮೆಲ್ಲುವಾಗ
ಪರಿಪರಿಯ ಪುಷ್ಪವೀಳ್ಯ ಅರ್ಪಿಸುವಾಗ
ಸರುವಾಂತರ್ಯಾಮಿ ಗುರುಮಧ್ವರಂತರಾತ್ಮಕ
ಪುರಂದರ ವಿಠಲಗೆ ಸಮರ್ಪಣೆ ಮಾಡಿರೊ ೩

## ೧೮೧

ಮಧ್ವರಾಯಾ–ಗುರು–ಮಧ್ವರಾಯಾ
ಮಧ್ವರಾಯಾ–ಗುರು–ಮಧ್ವರಾಯಾ ಪ

ರಾಮಾವತಾರದೊಳೊಮ್ಮೆ ಮಧ್ವರಾಯಾ
ಆ ಮಹಾ ಹನುಮನಾದೆ ಮಧ್ವರಾಯಾ ॥
ವಾಮಮುಷ್ಟಿಲಿ ರಾವಣನ ಗೆಲಿದೆ ಮಧ್ವರಾಯಾ ॥
ಕಾಮಿತಾರ್ಥ ಸುರರಿಗಿತ್ತೆ ಮಧ್ವರಾಯಾ ೧

ಕೃಷ್ಣಾವತಾರದೊಳೊಮ್ಮೆ ಮಧ್ವರಾಯಾ
ದುಷ್ಟಕುಲಕೆ ಭೀಮನಾದೆ ಮಧ್ವರಾಯಾ ॥

ಕುಟ್ಟಿದೆ ಕೌರವರನೆಲ್ಲ ಮಧ್ವರಾಯಾ – ಶ್ರೀ –
ಕೃಷ್ಣನ ಪ್ರೀತಿಯ ಪಡೆದೆಯೊ ಮಧ್ವರಾಯಾ ೨

ಧರೆಯೊಳು ಯತಿಯಾಗಿ ಜನಿಸಿದೆ ಮಧ್ವರಾಯಾ
ಗುರುವ್ಯಾಸರ ಹಿತವ ಪಡೆದೆ ಮಧ್ವರಾಯಾ
ದುರುಳಮಾಯಿಮತವ ಮುರಿದೆ ಮಧ್ವರಾಯಾ
ಪುರಂದರ ವಿಠಲನ ದಾಸನಾದೆ ಮಧ್ವರಾಯಾ ೩

## ೧೮೨

ಮಧ್ವಮುನಿಯೆ – ಗುರು – ಮಧ್ವಮುನಿಯೆ ಪ

ಮಧ್ವಮುನಿ ನಮ್ಮೆಲ್ಲರ । ಉದ್ಧರಿಸುವ ಕಾಣಿರೊ ಅ.ಪ

ಅಂದು ಹನುಮಂತನಾಗಿ । ಬಂದ ರಾಮಪದಾರ–
ವಿಂದದಿ ನೆರೆದು ತುಂಬಿಯಂದದಿ ಶೋಭಿಸಿದ ೧

ಏಣಾಂಕವಂಶದಿ ಪುಟ್ಟಿ । ಕ್ಷೋಣಿಪಾಲಕ ಶಿರೋ
ಮಾಣಿಕ್ಯವಾಗಿ ಹರಿಗೆ । ಪ್ರಾಣನೆಂದೆನಿಸಿಕೊಂಬ ೨

ಕಟ್ಟಕಡೆಯಲ್ಲಿ ಯೋಗ । ದಿಟ್ಟನಾಗಿ ಪುರಂದರ ।
ವಿಠಲಗಾವಾಸವಾದ । ಪೆಟ್ಟಿಗೆಯೊಲೊಪ್ಪುವಂಥ ೩

## ೧೮೩

ಮಾಮಝು ಭಾಪುರೆ ಭಳಿರೆ ಹನುಮಂತ
ರಾಮಪದ ಸೇವಿಪ ವೀರ ಹನುಮಂತ ಪ

ಹುಟ್ಟುತಲೆ ಹೊನ್ನ ಕಚ್ಚುಟವ ಕುಂಡಲವೆರಸಿ
ನಿಷ್ಠೆಯಲಿ ರಘುಪತಿಯ ಪಾದವನೆ ಕಂಡು ॥
ದಿಟ್ಟಿ ಹರಿದಾಡಿ ಮನಮುಟ್ಟಿ ಪೂಜಿಸಲಜನ
ಪಟ್ಟಕನುವಾದ ಸಿರಿವಂತ ಹನುಮಂತ ೧

ಅಂಬರಕೆ ಪುಟನೆಗೆದು ಅಂಬುಧಿಯ ನೆರೆ ದಾಟಿ
ಕುಂಭಿನಿಯ ಮಗಳಿಗುಂಗುರವನಿತ್ತು ।
ಬೆಂಬಿಡದೆ ಲಂಕೆಯನು ಸಂಭ್ರಮದಿ ಸಖಿಗಿತ್ತೆ
ಗಂಭೀರ ವೀರಾಧಿವೀರ ಹನುಮಂತ ೨

ಅತಿದುರುಳ ರಕ್ಕಸನು ರಥದ ಮೇಲಿರಲು ರಘು–
ಪತಿಯು ಪದಚರಿಯಾಗಿ ನಿಂತಿರಲು ನೋಡಿ ॥
ಪೃಥವಿ– ಗಗನಕೆ ಬೆಳೆದು ರಥವಾದೆ ಒಡೆಯನಿಗೆ
ಅತಿ ಭಯಂಕರ ಸತ್ವವಂತ ಹನುಮಂತ ೩

ಒಡೆಯ ಉಣಕರೆಯಲಂದಡಿಗಡಿಗೆ ಕೈಮುಗಿದು
ದೃಢಭಕ್ತಿಯಿಂದ ಮೌನದಿ ಕುಳಿತು ॥
ಎಡೆಯಕೊಂಡೆದ್ದೋಡಿ ಗಗನದಿ ಸುರರಿಗೆ
ಕೊಡುತ ಸವಿದುಂಡ ಗುಣವಂತ ಹನುಮಂತ ೪

ಪ್ರಥಮದಲಿ ಹನುಮಂತ ದ್ವಿತೀಯದಲಿ ಕಲಿಭೀಮ
ತೃತೀಯದಲಿ ಗುರುಮಧ್ವಮುನಿಯೆನಿಸೀ ॥
ಪ್ರತಿಯಿಲ್ಲದಲೆ ಮೆರೆದೆ ಪುರಂದರ ವಿಠಲನ
ಸುತ್ತ ನಿನಗಾರು ಸರಿ – ವಿಜಯ ಹನುಮಂತ ೫

## ೧೮೪

ಮುಖ್ಯಪ್ರಾಣಾ ಎನ್ನ ಗುರುವೇ ಪ

ರಕ್ಕಸಾಂತಕ ಶ್ರೀ ರಾಮನ ನಿಜದಾಸ ಅ.ಪ

ತಂದೆ ನೀನೆ ಎನಗೆ ತಾಯಿ ನೀನೆ । ಬಂಧು ನೀನೆ
ಎನಗೆ ಬಳಗ ನೀನೇ ।
ಎಂದೆಂದಿಗೂ ನಮ್ಮೆಲ್ಲರ ರಕ್ಷಿಪನು ನೀನೇ ೧

ತಾತ ನೀನೇ ಎನಗೆ ಕರ್ತ ನೀನೇ । ವಿತ್ತ ನೀನೆ
ಎನಗೆ ವಿಭವ ನೀನೆ ।
ಸತ್ಯ ನೀನೇ ಸದಾಚಾರವು ನೀನೇ ೨

ಸುಖವು ನೀನೇ ಎನಗೆ ಸುಲಭ ನೀನೇ ।
ಏಕಾಂತ ಶ್ರೀ ಪುರಂದರವಿಠಲನ ಭಕುತ ನಿಜವು ನೀನೇ ೩

## ೧೮೫

ರಾಯನ ನೋಡಿರೋ ಮಧ್ವ ರಾಯನ ಪಾಡಿರೊ ಪ

ಅಂಜನೆಯಲಿ ಹುಟ್ಟಿ ಅಂಬರಕಡರಿದ
ಹರಿಯೋ ಸಿಂಹದ ಮರಿಯೋ ।
ಕಂಜಾಕ್ಷಿಯ ಸುದ್ದಿಗೆ ಶರಧಿಯ ಲಂ
ಘಿಸಿದ ಪುರ ಸಂಧಿಸಿದ
ಅಂಜದೆ ವನವನು ಕಿತ್ತಿದ ಪುರವನು
ಸುಟ್ಟ ತಾ ಬಲು ದಿಟ್ಟಾ ।
ಸಂಜೀವನ ಗಿರಿ ತಂದು ವಾನರರ
ಪೊರೆದಾ ರಾಮನ ಬೆರೆದಾ ೧

ಕುಂತಿ ಕುಮಾರನು ಶೀಮೆಗೆ ಹರುಷದಿ
ಬೆಳೆದ ಖಳರನು ತುಳಿದ ।
ಅಂತ ಕೌರವ ದುಶ್ಯಾಸನರಾ ಶಿರ
ತರಿದಾ ಚಲವನು ಮೆರೆದ ।
ಸಂತಾಪವ ಪಡಿಸಿದ ಕುಜನಕೆ ಭೀಮ –
ನಾದ ಸನ್ನುತ ನಾದ ।
ಕಂತುಜನಕ ಶ್ರೀಕೃಷ್ಣನ ಪಾದದಿ
ಬಿದ್ದ ಮದಗಜ ಗೆದ್ದ ೨

ಮುನಿಕುಲದಲಿ ಉದಿಸಿದ ಗುರುಮಧ್ವ ತಾ
ನಾದ ಧರೆಯಲಿ ಮೆರೆದ ।
ಅನಿಮಿಷರೊಡೆಯ ಶ್ರೀ ವೇದವ್ಯಾಸರ
ಚರಣ ಅನುದಿನ ಸ್ಮರಣ ।

ಕನಸೊಳು ಕಾಣದ ಅದ್ವೈತಂಗಳ
ಮುರಿದ ತತ್ವ ತೋರಿದ ।
ಘನಮಹಿಮ ಶ್ರೀ ಪುರಂದರ ವಿಠಲನ
ದಾಸ ಪಡೆದ ಸನ್ಯಾಸ ೩

## ೧೮೬

ವನಿತೆ ನೀ ತೋರಿಸೆ ಹನುಮನ ಬೇಗ ।
ತನು ಮನ ಧನವನು ನಿನಗೀವೆನೀಗ ಪ

ಆತುರದಿಂದಲಿ ಉದಧಿಹಾರಿದವನ ।
ಪ್ರೀತಿಯಲಿ ರಾಮನ ಮುದ್ರೆಯಿತ್ತವನ ॥
ಘಾತಕರನ್ನು ಮುರಿದಟ್ಟಿದವನ ಸತಿ ।
ಸೀತೆಯ ಪತಿ ರಘುನಾಥಗರ್ಪಿಸಿದನ ೧

ಪಾಂಡುನಂದನನಿಗೆ ಅನುಜನಾಗಿಹನ ।
ಪುಂಡರೀಕಾಕ್ಷನ ಚರಣಸೇವಿಪನ ॥
ಪುಂಡ ಕೌರವಶಿರವ ಚೆಂಡನಾಡಿದವನ ೨

ಎರಡು ಮೂರಾರೊಂದು ಕುಮತ ಖಂಡಿಸಿದನ ।
ಭರದಿ ಮಧ್ವಮತ ಉದ್ಧರಿಸಿದನ ॥
ಧರೆಯೊಳಧಿಕ ಶ್ರೀಹರಿಯ ಭಜಕನ ।
ವರದ ಶ್ರೀ ಪುರಂದರ ವಿಠಲರಾಯನ ೩

## ೧೮೭

ವೀರ ಹನುಮ ಬಹುಪರಾಕ್ರಮ ಸುಜ್ಞಾನವಿತ್ತು
ಪಾಲಿಸಯ್ಯ ಜೀವರುತ್ತಮ ಪ

ರಾಮದೂತನೆನಿಸಿಕೊಂಡಿ ನೀ ರಾಕ್ಷಸರ
ವನವನೆಲ್ಲ ಜಯಿಸಿ ಬಂದೇ ನೀ ॥

ಜಾನಕಿಗೆ ಉಂಗುರವಿತ್ತು
ಜಗತಿಗೆಲ್ಲ ಹರುಷವಿತ್ತು
ಜಾತಿಮಣಿಯ ರಾಮಗಿತ್ತು
ಲೋಕದಿ ಪ್ರಖ್ಯಾತನಾದೆ ೧

ಗೋಪಿಸುತನ ಪಾದ ಪೂಜಿಸಿ ಗದೆಯ ಧರಿಸಿ ।
ಕೌರವರ ಬಲವ ಸವರಿಸಿ ॥
ದ್ರೌಪದಿಯ ಮೊರೆಯ ಕೇಳಿ
ಕರುಣದಿಂದ ತ್ವರದಿ ಬಂದು
ಪಾಪಿ ಕೀಚಕನನು ಕೊಂದು
ಭೀಮಸೇನನೆನಿಸಿಕೊಂಡೆ ೨

ಮಧ್ಯಗೇಹನಲಿ ಜನಿಸಿ ನೀ ಬಾಲ್ಯದಲ್ಲಿ
ಮಸ್ಕರಿಯ ರೂಪಗೊಂಡೆ ನೀ ॥
ಸತ್ಯವತಿಯ ಸುತನ ಭಜಿಸಿ ।
ಸಮ್ಮುಖದಲಿ ಭಾಷ್ಯ ಮಾಡಿ
ಸಜ್ಜನರನು ಪಾಲಿಸಿದ – ಪು
ರಂದರವಿಠಲನ ದಾಸ ೩

## ೧೮೮

ಶ್ರೀ ತತ್ವವಾದ ಮತವ ಪ

ಶ್ರೀ ತತ್ವವಾದ ಮತವಾರ್ಧಿ ಶುಭಚಂದ್ರಮನ ।
ಭೂತಲದೊಳಪ್ರತಿಮನೆನಿಪ ಶ್ರೀ ಯತಿವರನ ।
ಪ್ರೀತಿಯಿಂ ಭಜಿಸೆ ಇಷ್ಟಾರ್ಥಗಳ
ಸಲಿಸುವವಾತಜಾತನ ಸ್ಮರಿಸಿರೈ ಅ.ಪ

ಶ್ರೀಮಾರುತನು ತ್ರೇತೆಯಲಿ ಹನುಮನೆಂದೆನಿಸಿ ।
ತಾ ಮುದದಿ ಅಂಜನಾದೇವಿ ಗರ್ಭದಿ ಜನಿಸಿ ।

ರಾಮಪಾದಾಂಬುರುಹ ಭಜಿಸಿ ಸದ್ಭಕ್ತಿಯಲಿ
ಸ್ವಾಮಿಯಾಜ್ಞೆಯನೆ ಕೊಂಡು ।
ನೇಮದಿಂ ಸಾಗರವ ದಾಟಿ ಲಂಕೆಯ ಪೊಕ್ಕು ।
ಪ್ರೇಮದಿಂದೊಯ್ದು ಮುದ್ರೆಯ ಜಾನಕಿಗೆ ಕೊಟ್ಟು ।
ಆ ಮಹದ್ವನದ ದನುಜರನೆಲ್ಲವಳಿದ ನಿಸ್ಸೀಮ
ಹನುಮನ ಭಜಿಸಿರೈ ೧

ದ್ವಾಪರದಿ ಮಾರುತನು ಕುಂತಿದಾರಕನೆನಿಸಿ ।
ದ್ವಾಪರನ ಯುಕ್ತಿಯಿಂದುತ್ಕೃಷ್ಟರಾಗಿದ್ದ ।
ಪಾಪಿಗಳನಳಿದು ಕೀಚಕ ಜರಾಸಂಧಾದಿ
ಭೂಪಾಲಕರನು ತರಿದು ॥
ದ್ರೌಪದಿಗೆ ಸೌಗಂಧಿ ಕುಸುಮವನು ತರಪೋಗ –
ಲಾಪಥದೊಳಸುರ ಮಣಿಮಂತ ಕದನವ ಮಾಡೆ।
ಕೋಪದಿಂದವನ ಮರ್ದಿಸಿದನತಿ
ಬಲವಂತನಾ ಪುರುಷನಂ ಭಜಿಸಿರೈ ೨

ಕಲಿಯುಗವು ಪ್ರಾಪ್ತವಾಗಲು ಮಧ್ವನಾಮದಿಂ
ದಿಳೆಯೊಳವತರಿಸಿ ಸೋಹಂ ಎಂಬ ಶಂಕರನ
ಹುಲುಮತಂಗಳ ಜರಿದು ಮಾಯಿಗಳ
ಗೆಲಿದು ಮೋಹನ ಶಾಸ್ತ್ರಬಲೆಯನರಿದು
ಮಥಿತ ದರುಶನವೈದ ನುಂಗಿ ಜೀರ್ಣಿಸಿಕೊಂಡು
ಪ್ರಲಯ ಭೈರವನೆಂಬ ಬಿರುದ ಅವನಿಯ ಮೇಲೆ
ನೆಲೆಗೊಳಿಸಿ ವಿಷ್ಣು ಪರದೈವವೆಂದರುಹಿದಾ
ಅಲವಬೋಧರ ಭಜಿಸಿರೈ ೩

ಪ್ರತಿವಾದಿಗಿದಿರಾಗಿ ತಲೆಯೆತ್ತದಂತೆ ಸಂ–
ತತ ಧರೆಯೊಳದ್ವೈತವಂಕುರಿಸದಂತೆ ದು–

ರ್ಮತದ ಮೋಹನಶಾಸ್ತ್ರ ಪಲ್ಲವಿಸದಂತೆ ಮಾಯಿಗಳ
ಮತಗಳ ಮತ ಹೆಚ್ಚದಂತೆ ॥
ಕ್ಷಿತಿಯೊಳಗೆ ಶ್ರೀತತ್ವವಾದ ನೆಲಸಿಪ್ಪಂತೆ ।
ಶ್ರುತಿಶಾಸ್ತ್ರವದ್ವೈತವಂ ಬಿಟ್ಟು ಸೆಳೆವಂತೆ
ಪ್ರತಿಪಾದಿಸುವ ಖಳರ ದುರ್ಭಾಷ್ಯಗಳ ಜರಿದ
ಯತಿರಾಯರ ಭಜಿಸಿರೈ ೪

ಪರಮವೈಷ್ಣವರ ಮಿಂಚಿಡುವ ರತ್ನದ ಸಾಣೆ ।
ಪರವಾದಿಗಳ ಬೆನ್ನ ಮುರಿವ ವಜ್ರದ ಸಾಣೆ ।
ಗುರುಮಧ್ವಮುನಿಯ ಬಲುವಿದ್ಯ ಸಾಮರ್ಥ್ಯಕ್ಕೆ
ಸರಿಗಾಣೆ ಲೋಕದೊಳಗೆ ॥
ಧರೆಯೊಳಗೆ ಶ್ರೀತತ್ವವಾಗಿ ನೆಲಸಿಹ ವೀಣೆ ।
ಚರಿಸದಂತಿಳೆಯಲದ್ವೈತಕಿಕ್ಕಿದ ಆಣೆ ।
ವರಮೂರ್ತಿ ಚೈತನ್ಯ ವಂದ್ಯ ಸುತ್ರಾಮನೇ ।
ಪೂರ್ಣಪ್ರಜ್ಞರ ಭಜಿಸಿರೈ ೫

ಅಕಳಂಕ ಚರಿತನೆ ಮುಮುಕ್ಷ ಮಸ್ತಕದ ಮಣಿ ।
ನಿಖಿಳ ಪೌರಾಣಶ್ರುತಿ ಶಾಸ್ತ್ರದಾಗಮದ ಖಣಿ ।
ಸಕಲವಾದಿಗಳ ಜಿಹ್ವೆಯಲಿ ಮೆಟ್ಟಿದ ಆಣಿ
ಭಾಗವತ ಚಿಂತಾಮಣಿ ॥
ಯುಕುತಿ ಪರಿಪೂರ್ಣಯತ್ಯಾಶ್ರಮಕೆ ಕಟ್ಟಾಣಿ ।
ಪ್ರಕಟ ಕವಿಜನ ಕಮಲವ್ಯೂಹಕೆ ಗಗನಮಣಿ ।
ಸಕಲ ಜಗವಂದ್ಯ ಚೈತನ್ಯ ಚಿಂತಾಮಣಿ
ಮುಖ್ಯಪ್ರಾಣರ ಭಜಿಸಿರೈ ೬

ಮುಂದೆ ಅಜನಾಗಿ ಪವಮಾನ ಕೃತಯುಗದಲ್ಲಿ ।
ಒಂದು ನಿಮಿಷದಲಿ ಸೃಜಿಸುವನು ಸಚರಾಚರವ ।

ಸಂದೇಹವಿಲ್ಲ ತಪ್ಪದು ವೇದವಾಕ್ಯವಿದು
ಹಿಂದೆ ಶ್ರೀಹರಿಸೇವೆಯ ॥
ಒಂದು ಬಯಸದಲೆ ನಿಚ್ಚಟದ ಭಕ್ತಿಯಲಿ ತಾ –
ನಂದು ಮಾಡಿದ ಸುಕೃತ ಫಲದಿಂದ ಬ್ರಹ್ಮತ್ವ ।
ಬಂದು ಯುಗ ಯುಗದೊಳವರಿತರಿಸಿ ದೃಷ್ಟವ
ತೋರ್ಪ ನಂದಮುನಿಪರ ಭಜಿಸಿರೈ ೭

## ೧೮೯

ಶ್ರೀ ಮಧ್ವರಾಯರ ಸೇವೆ ದೊರಕುವುದು
ಜನುಮ ಸಫಲ ಕಾಣಿರೋ ಪ

ಶ್ರೀಮದಾನಂದತೀರ್ಥರ ಪಾದವ ನೆನೆವರು
ಸಾಮಾನ್ಯ ಸುರರು ಕಾಣಿ–ಬೊಮ್ಮನ ಆಣಿ ಅ.ಪ

ಜಗತು ಸತ್ಯವು ಅಲ್ಲ ಜಡ–ಜೀವ ಭೇದವಲ್ಲ
ಅಗುಣನು ಪರಬೊಮ್ಮನು–॥
ಹೀಗೆ ನುಡಿವ ಜನರ ನಿಗಮಶಾಸ್ತ್ರದಿ ಗೆದ್ದು
ಜಗ ಸತ್ಯ ಸಗುಣ ಬ್ರಹ್ಮ ಎಂದು ಪೇಳುವ ೧

ಹರಿ ಸರ್ವೋತ್ತಮ ನಿತ್ಯ ತರುವಾಯ ರಮಾದೇವಿ
ತರುವಾಯ ವಿಧಿಪ್ರಾಣರು
ಸರಸ್ವತಿ ಭಾರತಿ ಗರುಡ ಅನಂತ ರುದ್ರ
ತರುವಾಯ ಆರು ದೇವಿಗಳು ೨

ಸೌಪರ್ಣಿ ವಾರುಣಿದೇವಿ ಅಪರ್ಣಾದೇವಿಯರು ಸಮರು
ದ್ವಿಪದಿ ಮನ್ವಾದಿಗಳು ॥
ಈ ಪರಿ ತಾರತಮ್ಯ ಜಪ–ಧ್ಯಾನಾರ್ಚನೆಯಿಂದ
ಅಪವರ್ಗದನ ಸೇವೆಯ ಮಾಡಿರೊ ಎಂಬ ೩

ಒಂದೊಂದು ಯುಗದಲಿ ಅನಂತ ಸೇವೆಯ ಮಾಡಿ
ಚೆಂದದಿಂದಲಿ ಲಾಲಿಸಿ ॥
ಇಂದಿರಾರಮಣ ಗೋವಿಂದನೇ ದೈವವೆಂದು ।
ಸಂದೇಹವಿಲ್ಲದೆ ಸಾಧಿಸಿ–ಮಾಯೀ ಸೋಲಿಸಿ ೨

ಹಿಮಗಿರಿಯಿಂದ ಸೇತುವೆಯ ಪರ್ಯಂತರ
ಭ್ರಮಿಸುತ ಸುಜನರಿಗೆ ॥
ಕ್ರಮತತ್ತ್ವ ಬೋಧಿಸಿ ಕಮಲನಾಭನ ಮೂರ್ತಿ
ಕ್ರಮವರಿತು ಸ್ಥಾಪಿಸಿ ಪೂಜಿಸಿರೆಂದ ೫

ಭೂತಳದೊಳು ರೌಪ್ಯಪುರದಿ ನೆಲಸಿ ಗೆದ್ದು
ಧಾತ್ರೀ ಮುದ್ರೆಯ ತೋರಿಸಿ ॥
ಈತನೇ ಹನುಮಂತ ಈತನೇ ಭೀಮಸೇನ
ಈತನೇ ಭವಿಷ್ಯದ ಬ್ರಹ್ಮ ಜೀವೋತ್ತಮ ೬

ಶ್ರೀಮದನಂತನೆ ಅನಂತಕಾಲಕೆಯೆಂದು
ಯಮಕ ಭಾರತ ತೋರಿಸಿ
ಸ್ವಾಮಿ ಸರ್ವಾಂತರ್ಯಾಮಿ । ಸರ್ವಗುಣಪೂರ್ಣನೆಂದು
ಪ್ರೇಮಿ ಪುರಂದರ ವಿಠಲನ ದಾಸನಾದ ೭

## ೧೯೦

ಶ್ರೀಮದಾನಂದ ತೀರ್ಥ ಹನುಮ । ಭೀಮ
ನಿನ್ನ ಸಮಾನ ಪುರುಷರು
ಈ ಮೂಜಗದೊಳಿಲ್ಲವೆಂದು ಶ್ರೀ ರಾಮ
ಸಹಭೋಜನವನೀಯನೆ? ಪ

ಹರಿವಿರಿಂಚಿ ಸಹಾಯದಿಂದ । ಹರನು
ತ್ರಿಪುರವನಳಿಯಲಾಗ ।

ಬರಿದೆ ಕೊಂಡಾಡಿದರು ಸರ್ವರು ।
ಅರಿಯದೆಯೆ ನಿನ್ನ ಸಾಹಸ ॥
ಶರಧಿ ಲಂಘಿಸಿ ದಾನವರನು ತರಿದು
ಸೀತೆಗೆ ಉಂಗುರವಿತ್ತು ।
ಪುರವನುರುಹಿ ಹರಿಯಡಿಗೆ ಆ ಕುರುಹ
ತಂದು ಮುಟ್ಟಿಸಿದೆಯೊ ೧

ಸಾಸಿರದ ತನ್ನ ಪೆಡೆಯ ನಡುವೆ । ಈಸು
ಸಚರಾಚರವನೆಲ್ಲ ।
ಸಾಸಿವೆಯಂದದಲಿ ಇಟ್ಟಾ । ಶೇಷನ–ಮೂಲರೂಪದ ॥
ಆ ಶಕುತಿಯನು ತೋರಿಸಲು
ದಶಾಸ್ಯನೆಳೆಯುವ ಸೌಮಿತ್ರಿಯನು
ದಾಶರಥಿಯ ಬಳಿಗೆ ತಂದು । ನೀ ಸಲಹಿದೆ ಜಗವರಿಯಲು ೨

ತನ್ನ ಜನನಿಯೊಬ್ಬಳಿಗೆ ಸುಪರ್ಣ ಬಳಲಿ ಸುಧೆಯ ತರಲು
ಇನ್ನು ಪೊಗಳುತಿಹುದು ಲೋಕ । ನಿನ್ನಂತೆ ದೂರದಲಿಹ ॥
ಉನ್ನತದ ಶತಯೋಜನಗಲದ । ಅನ್ಯರು ತರಲಾರದ ಸಂಜೀ ।
ವನ್ನ ಗಿರಿಯ ತಂದು ಕಪಿಗಳನ್ನು ಕಾಯ್ದೆ ತವಕದಿಂದ ೩

ಸಕಲ ಪ್ಲವಗನಿಕರ ರಾಮನ । ತ್ರಿಕರಣ ಸೇವೆಯನು ಮಾಡಿ ।
ಮುಕುತಿ ಬೇಡಲಿತ್ತು ನಿನಗೇನು । ಬೇಕೆಂದು ಕೇಳಲು ನೀನು ನಾ ॥
ಲುಕು ಪುರುಷಾರ್ಥಗಳ ಜರಿದು । ಭಕುತಿಯ ಕೊಡು ಎನಲು ನವಕ
ನಕದ ಮಾಲೆ ಕೊರಳಿಗಿಟ್ಟು ಜಾ । ನಕಿರಮಣನು ನಿನ್ನ ಪೊಗಳಿದ ೪

ಶರಧಿಯ ಮಥನದೊಳುದಿಸಿದ । ಗರಳ ಜಗತ್ತನು ಅಂಜಿಸೆ
ಸಿರಿಯರಸನ ಪೆರ್ಮೆಯಿಂದ । ಸುರಿದು
ಅದನು ಜೀರ್ಣಿಸಿಕೊಂಡ ॥

ಮಾರುತನವತಾರ ವೃಕೋ । ದರನೆ ನೀನು ಎಂದರಿಯದೆ
ಮರುಳ ಕೌರವರಿಕ್ಕಿದ ವಿಷವ । ಭರದಿ
ಉಂಡು ತೇಗಿದುದರಿದೆ ? ೫

ಅವನಿ ಭಾರಕೆ ಮುಖ್ಯರಾದ । ಕವುರವ ಕೀಚಕಾದಿಗಳನು
ಬವರ ಮುಖದಿ ನಗುತ ಗೆಲಿದು ।
ಹವಿಯ ಕೃಷ್ಣನಿಗರುಪಿಸಿ
ದಿವಿಜರೆದುರುಗೊಳಲು ಅವರ ।
ನವರತಾರತಮ್ಯದಿ ಮನ್ನಿಸಿ ।
ಪವನಲೋಕದೊಳು ಮೆರೆದೆ ದ್ರವುಪದಿಯ ಸಹಿತನಾಗಿ ೬

ಸುರಾಸುರರ ಸಂಗ್ರಾಮದಲಿ । ಅರಿ
ವಿಪ್ರಚಿತ್ತಿಯ ನೀನು ಕೊಲ್ಲಲು ।
ವಿರಿಂಚಿ–ಹರರ ವರದಿಂದವನೆ ।
ಜರಾಸಂಧನಾಗಿ ಇಳೆಯೊಳು ।
ಅರಸುಗಳನು ಕಾಡಲವನ ಸರ್‍ರನೆ ಸೀಳಿ ಪಶುವಿನಂತೆ
ಹರಿಗೆ ಅರ್ಪಿಸಲವನು ಸಕಲಾ । ಧ್ವರಕ್ಕಿಂತಲು ತೃಪ್ತನಾದ ೭

ನಡುಮನೆಯೆಂಬ ಸಾಧುದ್ವಿಜನ । ಮಡದಿಯ
ಬಸಿರಿನಲಿ ಉದಿಸಿ
ಕಡು ಕುಮತದ ಮಾಯಿಗಳನು । ಅಡಿಗಡಿಗೇ ಸಚ್ಛಾಸ್ತ್ರದಿ ॥
ತಡೆದು ಆನಂದ ಶುಭಗುಣಗಳ । ಕಡಲು
ಹರಿಸರ್ವೋತ್ತಮನೆಂದು
ಒಡಂಬಡಿಸಿ ಸ್ವಮತವನ್ನು । ಪೊಡವಿಯೊಳಗೆ
ಸ್ಥಾಪಿಸಿದೆಯೊ ನೀ ೮

ಮರುತ ನಿನ್ನವತಾರ ತ್ರಯವ । ನರಿತು
ಭಜಿಪಗೆ ಶ್ವೇತದ್ವೀಪ ।
ದರುಶನವನೆ ಮಾಡಿಸಿ ಶ್ರೀ । ಪುರಂದರ ವಿಠಲೇಶನ ।
ಕರುಣಕಟಾಕ್ಷದಿಂದ ವೈಕುಂಠ ಪುರದಿ ಅನಂತಾಸನದಲಿ ।

ಪರಮಾನಂದವ ಪಡಿಸಿ ಹೊರೆವೆ ।
ಪರಿಪರಿಯ ಭೋಗಗಳನಿತ್ತು ೬

## ೧೯೧

ಸ್ವಾಮಿ ಮುಖ್ಯಪ್ರಾಣ ನೀ ಮಲೆವರ ಗಂಟಲಗಾಣ ಪ

ಸಕಲವಿದ್ಯಾಪ್ರವೀಣ ನೀ ಹಿಡಿದೆಯೋ ರಾಮರ ಚರಣ ಅ.ಪ

ಏಕಾದಶೀಯ ರುದ್ರ ನೀ ಹಿಡಿದೆಯೊ ರಾಮರ ಮುದ್ರಾ
ಸೇತುವೆಗಟ್ಟಿ ಸಮುದ್ರ ನೀ ಹಾರಿದೆಯೋ ಬಲಭದ್ರ ೧

ಸಂಜೀವಿನಿ ಪರ್ವತವನ್ನು ಅಂಜದೆ ತಂದೆಯೊ ನೀನು ।
ಅಂಜನೆ ತನುಸಂಭವನು ನಿನ್ನ ಬೇಡಿಕೊಂಬೆನೋ ನಾನು ೨

ವೈಕುಂಠಸ್ಥಳದಿಂದ ಬಂದು–ಪಂಪಾಕ್ಷೇತ್ರದಿ ನಿಂದು ।
ಯಂತ್ರೋದ್ಧಾರಕನೆಂದು–ಪುರಂದರ ವಿಠಲನೆ ಸಲಹೆಂದು ೩

## ೧೯೨

ಸೇವಕತನದ ರುಚಿಯೇನಳೆದೆಯೋ ।
ದೇವ ಹನುಮರಾಯ ನೀ ವೈರಾಗ್ಯ ಬೇಡಿ ಪ

ಉದಧಿಯ ದಾಟಿ ಸೀತೆಯ ಕಂಡು ಬಂದಾಗ
ಮದುವೆಯ ಮಾಡೆನ್ನಬಾರದಿತ್ತೆ ॥
ಪದದಿ ಪಾಷಾಣವ ಪೆಣ್ಣ ಮಾಡಿದನಿಗೆ
ಇದು ಏನಾಶ್ಚರ್ಯವೊ ನೀ ಬಯಸಲೊಲ್ಲದೆ ೧

ಕ್ಷಣದೊಳು ಸಂಜೀವನ ಗಿರಿ ತಂದಾಗ
ಧನವನು ಬೇಡಲು ಕೊಡದಿಹನೇ ॥
ವಿನಯದ ವಿಭೀಷಣಗೆ ರಾಜ್ಯಪದವನಿತ್ತ
ವನಿಗೆನಾಶ್ಚರ್ಯವೊ ಹನುಮ ನೀನೊಲ್ಲದೆ ೨

ಸಾರ್ವಭೌಮನು ತಾನೆ ಮೆಚ್ಚಿ ಬಂದಾಗಲೆ
ಉರ್ವಿಯ ಬೇಡಲು ಕೊಡದಿಹನೇ
ಸರ್ವವ ತೊರೆದು ಶ್ರೀ ಪುರಂದರವಿಠಲನ
ನಿರ್ವ್ಯಾಜ ಭಕುತಿಯ ಬೇಡಿಕೊಂಡೆಯಲ್ಲದೆ * ೩

## ೧೯೩

ಹನುಮ ನಮ್ಮ ತಾಯಿತಂದೆ–ಭೀಮ
ನಮ್ಮ ಬಂಧು ಬಳಗ ।
ಆನಂದ ತೀರ್ಥರೆಮಗೆ ಗತಿಗೋತ್ರವಯ್ಯ ಪ

ತಾಯಿ ತಂದೆ ಹಸುಳೆಗಾಗಿ ಸಾಯ ಮಾಡಿ ಸಾಕುವಂತೆ
ಆಯಾಸವಿಲ್ಲದೆ ಸಂಜೀವನ ತಂದೆ ॥
ಗಾಯಗೊಂಡ ಕಪಿಗಳನ್ನು ಸಾಯದಂತೆ ಪೊರೆದೆ ರಘು
ರಾಯನಂಘ್ರಿಗಳೆ ಸಾಕ್ಷಿ ತ್ರೇತಾಯುಗದಲ್ಲಿ ೧

ಬಂಧು ಬಳಗದಂತೆ ಆಪದ್ಬಂಧುವಾಗಿ ಪಾರ್ಥನಿಗೆ
ಬಂದ ದುರಿತಂಗಳ ಪರಿಹರಿಸಿ ॥
ಅಂಧಕಜಾತರ ಕೊಂದು ನಂದನಂದನಿಗರ್ಪಿಸಿದ ಗೋ–
ವಿಂದನಂಘ್ರಿಗಳೆ ಸಾಕ್ಷಿ ದ್ವಾಪರಯುಗದೆ ೨

ಗತಿಗೋತ್ರರಂತೆ ಸಾಧುಮತಿಗಳಿಂಗೆ ಗತಿಯನಿತ್ತು
ಮತಿಗೆಟ್ಟ ಇಪ್ಪತ್ತೊಂದು ಮತವ ಖಂಡಿಸಿ ।
ಮತಗೆಟ್ಟ ವೈಷ್ಣವರಿಗೆ ಗತಿಯ ತೋರಿದೆ ಪರಮಾತ್ಮ
ಗತಿ ಪುರಂದರ ವಿಠಲ ಸಾಕ್ಷಿ ಕಲಿಯುಗದಲ್ಲಿ ೩

## ೧೯೪

ಹನುಮಂತ ದೇವ ನಮೋ ಪ

ವನಧಿಯನು ದಾಟಿ ರಾವಣನ ದಂಡಿಸಿದೆ ಅ.ಪ

* ಈ ಕೀರ್ತನೆ ಕನಕದಾಸರ ಅಂಕಿತದಲ್ಲೂ ಇದೆ.

ಅಂಜನೆಯ ಆತ್ಮದಿಂದುದಿಸಿ ನೀ ಮೆರೆದೆಯೋ
ಕಂಜಸಖಮಂಡಲಕೆ ಕೈ ದುಡುಕಿದೆ ॥
ಭುಂಜಿಸೀರೇಳು ಜಗಂಗಳನು ಉಳುಹಿದೆ ಪ್ರ-
ಭಂಜನಾತ್ಮಜ ಗುರುವೆ ಸರಿಗಾಣೆ ನಿನಗೆ ೧

ಹೇಮ ಕುಂಡಲ ಹೇಮ ಯಜ್ಞೋಪವೀತಖಿಳ
ಹೇಮಕಟಿಸೂತ್ರ ಕೌಪೀನಧಾರೀ ॥
ರೋಮಕೋಟಿಲಿಂಗ ಸರ್ವಶ್ಯಾಮಲ ವರ್ಣ
ರಾಮಭೃತ್ಯನೆ ನಿನಗೆ ಸರಿಗಾಣೆ ಗುರುವೆ ೨

ರಾಮ–ಲಕ್ಷ್ಮಣರ ಕಂಡಾಳಾಗಿ ನೀ ಮೆರೆದೆ ।
ಭೂಮಿಜೆಗೆ ಮುದ್ರೆಯುಂಗುರವನಿತ್ತೆ ॥
ಆ ಮಹಾ ಲಂಕಾ ನಗರವೆಲ್ಲವನು ಸುಟ್ಟು
ಧೂಮ ಧಾಮವ ಮಾಡಿ ಆಳಿದೆಯೊ ಮಹಾತ್ಮ ೩

ಅಕ್ಷಯ ಕುಮಾರಕನ ನಿಟ್ಟೊರಸಿ ಬಿಸುಟು ನೀ
ರಾಕ್ಷಸಾಧಿಪ ರಾವಣನು ರಣದಲಿ ॥
ವಕ್ಷಸ್ಥಳದಲ್ಲಿ ಶಿಕ್ಷಿಸಲು ಮೂರ್ಛೆಯ ಬಗೆಯ
ರಕ್ಷಿಸಿದೆ, ರಕ್ಷಿಸಿದೆ ರಾಯ ಬಲವಂತ ೪

ಶ್ರೀಮದಾಚಾರ್ಯ ಕುಲದವನೆಂದೆನಿಸಿದೆಯ್ಯೆ
ಶ್ರೀ ಮಹಾಲಕುಮಿ ನಾರಾಯಣಾಖ್ಯ ॥
ಶ್ರೀ ಮನೋಹರ ಪುರಂದರ ವಿಠಲ ರಾಯನ
ಸೌಮ್ಯಮನದಾಳು ಹನುಮಂತ ಬಲವಂತ ೫

## ೧೯೫

ಹನುಮಂತ ನೀ ಬಲು ಜಯವಂತನಯ್ಯ ।
ಅನುಮಾನವಿಲ್ಲ ಆನಂದತೀರ್ಥರಾಯ ಪ

ರಾಮಸೇವಕನಾಗಿ ರಾವಣನ ಪುರವ ನಿರ್
ಧೂಮವ ಮಾಡಿದೆ ನಿಮಿಷದೊಳಗೆ ॥

ಭೂಮಿಯ ಪುತ್ರಿಗೆ ಮುದ್ರೆಯುಂಗುರವಿತ್ತು ।
ಕ್ಷೇಮ ಕುಶಲವ ಶ್ರೀರಾಮ ಪಾದಕರ್ಪಿಸಿದೆ ೧

ಕೃಷ್ಣಾವತಾರದಿ ಭೀಮನಾಗಿ ಬಂದು
ದುಷ್ಟ ದೈತ್ಯರನೆಲ್ಲ ಸಂಹರಿಸಿದೆ ।
ದೃಷ್ಟಿಹೀನ ಧೃತರಾಷ್ಟ್ರನ ವಂಶವನು
ಕಷ್ಟವಿಲ್ಲದೆ ಕೊಂದು ಶ್ರೀಕೃಷ್ಣಪಾದಕರ್ಪಿಸಿದೆ ೨

ಪತಿತ ಸಂಕರ ಹುಟ್ಟಿ ಮತವೆಲ್ಲ ಕೆಡಿಸಲು
ಮತಿ ಹೀನರಾದ ಸಜ್ಜನರಿಗೆಲ್ಲ ॥
ಅತಿ ಬೇಗದಲಿ ಮಧ್ವಯತಿ ರೂಪ ಧರಿಸಿ ಸದ್
ಗತಿ ಪಾಲಿಸಿದೆ ಪುರಂದರ ವಿಠಲನ ದಾಸ ೩

## ೧೯೬

ಹನುಮನ ಮತವೆ ಹರಿಯ ಮತವು ।
ಹರಿಯ ಮತವೇ ಹನುಮನ ಮತವು ಪ

ಹನುಮನು ಒಲಿದರೆ ಹರಿ ತಾನೊಲಿವನು ।
ಹನುಮನು ಮುನಿದರೆ ಹರಿಮುನಿವ ಅ.ಪ

ಹನುಮನ ನಂಬಿದ ಸುಗ್ರೀವ ಗೆದ್ದ ।
ಹನುಮನ ನಂಬದ ವಾಲಿಯು ಬಿದ್ದ ೧

ಹನುಮನು ಒಲಿದ ವಿಭೀಷಣ ಗೆದ್ದ
ಹನುಮನು ಮುನಿಯಲು ರಾವಣ ಬಿದ್ದ ೨

ಹನುಮನು ಪುರಂದರ ವಿಠಲನ ದಾಸ।
ಹನುಮನೊಳ್ ಪುರಂದರ ವಿಠಲನಾವಾಸ ೩

## ೧೯೭

ಹನುಮ ಭೀಮ ಮಧ್ವ ಮುನಿಯ ನೆನೆದು ಬದುಕಿರೊ
ಅನುಮಾನಂಗಳಿಲ್ಲದಲೆ ಮನದಭೀಷ್ಟಂಗಳನೀವ ಪ

ಪ್ರಾಣಿಗಳ ಪ್ರಾಣೋದ್ಧಾರ ಪ್ರಾಣರಲ್ಲುತ್ತಮ ಮತ್ತೆ
ಪ್ರಾಣಾಪಾನ ವ್ಯಾನೋದಾನ ಸಮಾನರೊಳುತ್ಕೃಷ್ಟ ॥
ಕಾಣಿರೇನೋ ಕಾಯಕರ್ಮ ಚಕ್ಷುರಿಂದ್ರಿಯಗಳಿಗೆ
ತ್ರಾಣಕೊಟ್ಟು ಸಲಹುವ ಜಾಣಗುರು ಮುಖ್ಯಪ್ರಾಣ ೧

ಕಾಮಧೇನು ಚಿಂತಾಮಣಿ ಕಲ್ಪವೃಕ್ಷನಾದ ಸ್ವಾಮಿ
ಪ್ರೇಮದಿಂದ ನೆನಯುವವರ ಭಾಗ್ಯಕ್ಕೆಣೆಯುಂಟೇ ? ॥
ಸಾಮಾನ್ಯವಲ್ಲವೊ ಈಗ ಮೋಕ್ಷಾದಿ ಸಂಪದದಾತ
ಆ ಮಹಾಪರೋಕ್ಷಜ್ಞಾನ ದಾರ್ಢ್ಯ ಭಕುತಿ ಕೊಡುವ ೨

ಅವತಾರ ತ್ರಯಗಳಿಂದ ಶ್ರೀಹರಿಯ ಸೇವಿಸುವ
ತವಕದಿ ಪೂಜಿಪ ಮಹಾಮಹಿಮೆಯುಳ್ಳವನು ॥
ಕವಿತೆವಾಕ್ಯವಲ್ಲವಿದು ಅವಿವೇಕವೆಂದೆಣಿಸಬೇಡಿ
ಭವಬಂಧನ ಕಳೆದು ಕಾವ ಪುರಂದರ ವಿಠಲನ ದಾಸ ೩

## ೧೯೮

ಹರಿಗೆ ಸರಿ ಮಿಗಿಲೆನಿಪರಿಲ್ಲ ದೈವಂಗಳೊಳು ।
ಗುರು ಮಧ್ವರಾಯರಿಗೆ ಸರಿಯಿಲ್ಲ ರಾಯರೊಳು ।
ಪರಮವೈಷ್ಣವರಿಗೆಣೆಯಿಲ್ಲ ಲೋಕದೊಳೆಂದು
ಬಿಡದೆ ಡಂಗುರವ ಹೊಯಿಸಿ ॥
ಬಿರುದ ಪಸರಿಸಿ ಢಕ್ಕೆಯವ ನುಡಿಸಿ ಎನ್ನುತಲಿ ।
ಶರಣು ಹೊಕ್ಕರ ಪಣೆಯ ದುರ್ಲೇಖಮಂ ತೊಡೆದು ।
ಬರೆದು ವೈಷ್ಣವಲಿಪಿಯ ಶುದ್ಧಾತ್ಮರಂ
ಮಾಳ್ಪ ಗುರುರಾಯರನು ಭಜಿಸಿರೈ ೧

ಭುವನ ಪಾವನರಪ್ಪ ಪೂರ್ಣಪ್ರಜ್ಞರ ಸ್ತೋತ್ರ ।
ನವರತ್ನಮಾಲೆಯಿದು ಶ್ರೀ ವಿಷ್ಣುದಾಸರಿಗೆ ।
ಶ್ರವಣಮಂಗಳವಪ್ಪ ತತ್ವಾಮೃತದ ಸಾರ
ಜನ್ಮ ಮೂಲೋತ್ಪಾಟನ ॥
ಜವನ ಗಂಟಲನೊಡೆದು ತನ್ನ ನಿಜದಾಸರಿಗೆ ।
ಧ್ರುವವಾಗಿ ಪರಮಪದವಿಯನಿತ್ತು ರಕ್ಷಿಸುವ ।
ಪವನನಂತರ್ಯಾಮಿ ಪುರಂದರ ವಿಠಲನ
ತವಕದಿಂದಲಿ ಭಜಿಸಿರೈ ೯

## iv. ಸರಸ್ವತಿ

### ೧೯೯

ಒಂದೆ ಮನದಲಿ ಭಜಿಸು ವಾಗ್ದೇವಿಯ ।
ಇಂದು ಮತಿಕೊಡುವಳು ಶ್ರೀಹರಿಯ ಧ್ಯಾನದೊಳು ಪ

ಹಿಂದೆ ಪ್ರಹ್ಲಾದನು ಕಮಲಜನ ಸತಿಗೆರಗಿ ।
ಬಂದು ಆರಂಭಿಸಲು ಹರಿ ವಿಶ್ವಮಯನೆಂದು ॥
ಬಂದ ವಿಪ್ಲವ ಕಳೆದು ಭಾವಶುದ್ಧಿಯನಿತ್ತು ।
ಹೊಂದಿಸಿದಳು ಶ್ರೀಹರಿಯ ಚರಣವನು ॥ ೧

ಅಂದು ದಶಮುಖನನುಜ ವಂದಿಸದೆ ವಾಣಿಯನು ।
ಬಂದು ತಪವನು ಗೈಯೆ ಬಹುಕಾಲಕೆ ॥
ಅಂದದಿಂದ ಮೆಚ್ಚಿ ವರವಧಿಕ ಬೇಡೆನಲು ।
ಬಂದು ಜಿಹ್ವೆಯಲಿ ನಿದ್ರೆಯನು ಬೇಡಿಸಿದಳು ೨

ಅರಿತು ಭಜಿಸಲು ಬಿಡದೆ ಅಜನರಸಿಯ ನಿತ್ಯ।
ಉರುತರವಾದ ವಾಕ್ ಶುದ್ಧಿಯನಿತ್ತು ॥
ನಿರುತ ಶ್ರೀ ಪುರಂದರ ವಿಠಲನ ಸೇವೆಯೊಳು ।
ಪರತತ್ವದ ಕಥಾಮೃತವನುಣಿಸಿದಳು ೩

## ೨೦೦

ಕೊಡು ಬೇಗ ದಿವ್ಯ ಮತಿ – ಸರಸ್ವತಿ
ಕೊಡು ಬೇಗ ದಿವ್ಯಮತಿ ಪ

ಮೃಡಹರಿಹಯಮುಖರೊಡೆಯಳೆ ನಿನ್ನಯ ।
ಅಡಿಗಳಿಗೆರಗುವೆ ಅಮ್ಮ ಬ್ರಹ್ಮನ ರಾಣಿ ಅ.ಪ

ಇಂದಿರಾರಮಣನ ಹಿರಿಯ ಸೊಸೆಯು ನೀನು।
ಬಂದೆನ್ನ ವದನದಿ ನಿಂದು ನಾಮವ ನುಡಿಸಿ ೧

ಅಖಿಳ ವಿದ್ಯಾಭಿಮಾನಿ ಅಜನ ಪಟ್ಟದ ರಾಣಿ ।
ಸುಖವಿತ್ತು ಪಾಲಿಸೆ ಸುಜನ ಶಿರೋಮಣಿ ೨

ಪತಿತ ಪಾವನೆಯೆ ನೀ ಗತಿಯೆಂದು ನಂಬಿದೆ ।
ವಿತತ ಪುರಂದರ ವಿಠಲನ ತೋರೆ ೩

## ೨೦೧

ನಲಿದಾಡೆ ಎನ್ನ ನಾಲಿಗೆ ಮೇಲೆ – ಸರಸ್ವತಿ ದೇವಿ ಪ

ಕುಣಿದಾಡೆ ಎನ್ನ ನಾಲಿಗೆ ಮೇಲೆ ಅ.ಪ

ಸಲಿಲಜೋದ್ಭವನ ವದನ ನಿಲಯಳೇ
ಇಳೆಯೊಳಪ್ರತಿಮ ಗುಣಾಂಬುಧಿ ತಾಯೆ ಅ.ಪ

ಘಿಲುಘಿಲು ಘಿಲ್ಲು ಗೆಜ್ಜೆಯ ನಾದ । ಭಳಿ ಭಳಿರೆಂಬಂದುಗೆ ।
ಹೊಳೆವ ಬೆರಳುಂಗುರ ಕಿಣಿಕಿಣಿನಾದ । ಎಳೆಯ ಮಾವಿನ ।
ತಳಿರ ಪೋಲುವ ದಿವ್ಯ ಪಾದ । ಚೆಲ್ವಪೆಂಡೆಯ ಭೇದ ॥
ನಲಿವ ಯುಗಳ ಜಂಘೆ । ಜಲಗುಳ್ಳೆಯಂತೆ ಜಾನು ।
ಥಳಥಳಿಸುವ ತೊಡೆ ಹೊಳೆವ ಸುಗುಣಿಯೆ ೧

ದಿನಕರ ಕೋಟಿ ತೇಜದಿ ಹೊಳೆವ ಅನುಪಮವಾದ ।
ಕನಕವಸನದಿಂದಲಿ ಎಸೆವ । ಘನವಾದ ಜಘನ ಗ–

ಗನದಂದದಿ ಕಟಿಯಲ್ಲಿ ಮೆರೆವ । ಮಣಿದಾಮವಿಭವ ॥
ತನು ಜಠರವು ಜಾಹ್ನವಿ ಸುಳಿನಾಭಿಯು ।
ಘನಸ್ತನಯುಗಳ ಚಂದನಲೇಪಿತಳೆ ೨

ದುಂಡುಮುತ್ತಿನ ಕೊರಳ ಹಾರ । ಉದ್ದಂಡಮಣಿ ಪ್ರ–।
ಚಂಡ ಮಿಣಿಮಿಣಿಸುವ ಹೊನ್ನಿನ ಹಾರ । ಕರಿರಾಜಪೋತನ ।
ಸೊಂಡಿಲಿನಂತೆ ಭುಜದ ಭಾರ ನಡೆವ ಒಯ್ಯಾರ ॥
ಮಂಡಿತವಾದ ಕಂಕಣ ತೋಳ್ಬಳೆಗಳು ।
ದುಂಡು ಹವಳ ಕೈಕಟ್ಟುಳ್ಳವಳೆ ೩

ನಸುನಗು ಮುಖವು ನಾಸಾಭರಣ । ಎಸೆವ ಕಪೋಲ ।
ಹೊಸ ಕುಂಡಲ ಚಳತುಂಬುಳ್ಳ ಶ್ರವಣ । ಬಿಸಜದಳದಂತೆ ।
ಎಸೆವ ಕರ್ಣಾಂತವಾದ ನಯನ । ತಿಲಕದ ಹಸನ ॥
ಶಶಿ ಸೂರ್ಯರ ಆಭರಣ ಸುಶೋಭಿತೆ ।
ಕುಸುಮ ಮುಡಿದ ಮೂರ್ಧಜವುಳ್ಳವಳೇ ೪

ಸಿಂಗಾರದ ಜಡೆಬಂಗಾರ । ಹೊಂಗೇದಗೆ ಮುಡಿದ ।
ಬಂಗಾರದ ಹೆರಳಿನ ರಾಗುಟಿ ವರ । ಭೃಂಗದ ಸ್ವರ ।
ಹಿಂಗದೆ ಭಕ್ತರ ಸಲಹುವ ಭಾರ । ಕಂಗಳ ಮನೋಹರ ॥
ರಂಗ ಪುರಂದರ ವಿಠಲರಾಯನ ।
ಮಂಗಳ ಮೂರ್ತಿಯ ತೋರೆ ಶುಭಾಂಗಿ ೫

## ೨೦೨

ಪಾಲಿಸೆಮ್ಮ ಮುದ್ದು ಶಾರದೆ–ಎನ್ನ–
ನಾಲಗೆಯಲಿ ನಿಲ್ಲಬಾರದೆ ಪ

ಲೋಲಲೋಚನೆ ತಾಯೆ । ನಿರುತ ನಂಬಿದೆ ನಿನ್ನ ಅ.ಪ

ಅಕ್ಷರಕ್ಷರ ವಿವೇಕವ ನಿಮ್ಮ ಕುಕ್ಷಿಯೊಳೀರೇಳು ಲೋಕವ ।
ಸಾಕ್ಷಾದ್ರೂಪದಿಂದ ಒಲಿದು ರಕ್ಷಿಸು ತಾಯೆ ೧

ಶೃಂಗಾರಪುರ ನೆಲೆವಾಸಿನಿ ದೇವಿ ಸಂಗೀತ ಗಾನ ವಿಲಾಸಿನಿ ।
ಭೃಂಗಕುಂತಳೆ ತಾಯೆ ಭಳಿರೇ ಬ್ರಹ್ಮನ ರಾಣಿ ೨

ಸರ್ವಾಲಂಕಾರಮಯ ಮೂರುತಿ–ನಿನ್ನ
ಚರಣವ ಸ್ತುತಿಸುವೆ ಕೀರುತಿ ।
ವರದ ಪುರಂದರ ವಿಠಲನ ಸ್ತುತಿಸುತ ೩

## ೨೦೩

ಶರಣೆಂಬೆ ವಾಣಿ ಪೊರೆಯೆ ಕಲ್ಯಾಣಿ ಪ

ವಾಗಭಿಮಾನಿ ವರಬ್ರಹ್ಮಾಣಿ
ಸುಂದರವೇಣಿ ಸುಚರಿತ್ರಾಣಿ ೧

ಜಗದೊಳು ನಿಮ್ಮ ಪೊಗಳುವೆನಮ್ಮ
ಹರಿಯ ತೋರಿಸೆಂದು ಪ್ರಾರ್ಥಿಪೆನಮ್ಮ ೨

ಪಾಡುವೆ ಶ್ರುತಿಯ ಬೇಡುವೆ ಮತಿಯ
ಪುರಂದರ ವಿಠಲನ ಸೋದರ ಸೊಸೆಯೆ ೩

## v. ಭಾರತಿ

## ೨೦೪

ಏನು ಮರುಳಾದೆಯೇ ಎಲೆ ಭಾರತೀ ಪ

ವಾನರ ಕುಲದೊಳಗೆ ಶ್ರೇಷ್ಠನಾದವಗೆ ಅ.ಪ

ಕಣ್ಣಿಲ್ಲದವಳ ಗರ್ಭದಲಿ ಜನಿಸಿ ಬಂದು
ನಿನ್ನ ತೊರೆದು ಬ್ರಹ್ಮಚಾರಿಯಾದ ॥
ಹೆಣ್ಣಿಗಾಗಿ ಪೋಗಿ ವನವ ಕಿತ್ತಾಡಿ ।
ಉಣ್ಣ ಕರೆದರೆ ಎಂಜಲೆಡೆಯನೊಯ್ದವಗೆ ೧

ಹುಟ್ಟಿದನು ಗುರುತಲ್ಪಗಾಮಿಯಾ ವಂಶದಲಿ ।
ನಟ್ಟಿರುಳೊಳೊಬ್ಬ ಅಸುರಿಯ ಕೂಡಿದ ॥
ಹೊಟ್ಟೆಗೆಂತಲೆ ಹೋಗಿ ಭಿಕ್ಷದನ್ನವನುಂಡು ।
ಅಟ್ಟಿ ಹಾಕುವನಾಗಿ ದಿನವ ಕಳೆದವಗೆ ೨

ಮಂಡೆ ಬೋಳಾಗಿ ಭೂಮಂಡಲವ ತಿರುಗಿದ ।
ಕಂಡವರು ಯಾರು ಈತನ ಗುಣಗಳ ॥
ಪುಂಡರೀಕಾಕ್ಷ ಶ್ರೀ ಪುರಂದರವಿಠಲನ ।
ಕೊಂಡಾಡುತಲಿ ಬೋರೆ ಮರದ ಕೆಳಗಿದ್ದವಗೆ ೩

## vi. ತುಳಸಿ

### ೨೦೫

ಎಲ್ಲಿ ಶ್ರೀ ತುಳಸಿಯ ವನವು ।
ಅಲ್ಲೊಪ್ಪುವರು ಸಿರಿ ನಾರಾಯಣರು ಪ

ಗಂಗೆ ಯಮುನೆ ಗೋದಾವರಿ ಕಾವೇರಿ ।
ಕಂಗೊಳಿಸುವ ಮಣಿಕರ್ಣಿಕೆಯು ॥
ತುಂಗಭದ್ರೆ ಕೃಷ್ಣವೇಣಿ ತೀರ್ಥಗಳೆಲ್ಲ ।
ಸಂಗಡಿಸುತ ವೃಕ್ಷಮೂಲದಲ್ಲಿರುವುವು ೧

ಸರಸಿಜಭವ ಭವ ಸುರಪ ಪಾವಕ ಚಂ–।
ದಿರ ಸೂರ್ಯ ಮೊದಲಾದವರು ॥
ಸಿರಿರಮಣನ ಆಜ್ಞೆಯಲಿ ಅಗಲದಂತೆ ।
ತರುಮಧ್ಯದೊಳು ನಿತ್ಯ ನೆಲಸಿಪ್ಪರು ೨

ಋಗ್ವೇದ ಯಜುರ್ವೇದ ಸಾಮ ಅಥರ್ವಣ ।
ಅಗ್ಗಳಿಸಿದ ವೇದಘೋಷಗಳು ॥
ಅಗ್ರಭಾಗದಲಿವೆ ಬೆಟ್ಟದೊಡೆಯನಲ್ಲಿ ।
ಶ್ರೀಘ್ರದಿ ಒಲಿವ ಶ್ರೀ ಪುರಂದರ ವಿಠಲ ೩

# ೨೧೦

ಚಂದ್ರಚೂಡ ಶಿವಶಂಕರ ಪಾರ್ವತಿ ರಮಣಾ
ನಿನಗೆ ನಮೋ ನಮೋ ಪ

ಸುಂದರ ಮೃಗಧರ ಪಿನಾಕಧರ ಹರ ।
ಗಂಗಾಧರ ಗಜಚರ್ಮಾಂಬರಧರ ಅ.ಪ

ನಂದಿವಾಹನಾನಂದದಿಂದ ಮೂಜಗದಿ ಮೆರೆವನು ನೀನೆ ।
ಕಂದರ್ಪನ ಕ್ರೋಧದಿಂದ ಕಣ್ದೆರೆದು ಕೊಂದ ಉಗ್ರನು ನೀನೆ ॥
ಅಂದು ಅಮೃತ ಘಟದಿಂದುದಿಸಿದ ವಿಷತಂದು
ಭುಂಜಿಸಿದವನು ನೀನೆ ।
ಬಂದು ಚೆಂದದಿ ಇಂದಿರೇಶ ಶ್ರೀ ರಾಮನ ಪೊಂದಿ
ಪೊಗಳುವವ ನೀನೆ ೧

ಬಾಲಮೃಕಂಡನ ಕಾಲನು ಎಳೆವಾಗ
ಪಾಲಿಸಿದಾತನು ನೀನೆ ।
ನೀಲಕಂಠ ಕಾಲಕೂಟ ವಿಷವ ಮೆದ್ದ
ಶೂಲಪಾಣಿಯು ನೀನೆ ।
ವಾಲಾಯದಿ ಕಪಾಲವ ಪಿಡಿದು ಭಿಕ್ಷೆ
ಕೇಳುವ ದಿಗಂಬರ ನೀನೆ ।
ಜಾಲ ಮಾಡುವ ಗೋಪಾಲನೆಂಬ
ಪೆಣ್ಣಿಗೆ ಮರುಳಾದವ ನೀನೆ ೨

ಧರೆಗೆ ದಕ್ಷಿಣ ಕಾವೇರಿ ತೀರ ಕುಂಭಪುರನಿವಾಸನು ನೀನೆ ।
ಕರದಲಿ ವೀಣೆಯ ನುಡಿಸುವ ನಮ್ಮ
ಉರಗಭೂಷಣನು ನೀನೆ ॥
ಕೊರಳಲಿ ಭಸ್ಮ ರುದ್ರಾಕ್ಷಿಯ ಧರಿಸಿದ
ಪರಮ ವೈಷ್ಣವನು ನೀನೆ ।
ಗರುಡ ಗಮನ ಶ್ರೀ ಪುರಂದರ
ವಿಠಲನ ಪ್ರಾಣ ಪ್ರಿಯನು ನೀನೆ ೩

## viii. ಶೇಷ ದೇವರು

### ೨೧೧

ಶೃಂಗಾರವಾಗಿದೆ ಸಿರಿರಂಗನ ಮಂಚ
ಅಂಗನೆ ಮಹಲಕುಮಿಯರಸ ಮಲಗುವ ಮಂಚ ಪ

ಬಡಿಗ ಮುಟ್ಟದ ಮಂಚ । ಮಡುವಿನೊಳಿಹ ಮಂಚ ।
ಮೃಡನ ತೋಳಲಿ ನೆಲಸಿಹ ಮಂಚ ॥
ಹೆಡೆಯುಳ್ಳ ಹೊಸಮಂಚ ಪೊಡವಿ ಪೊತ್ತಿಹ ಮಂಚ ।
ಕಡಲಶಯನ ಶ್ರೀ ರಂಗನ ಮಂಚ ೧

ಕಣ್ಣುಮೂಗಿನ ಮಂಚ ಬೆನ್ನು ಬಾಗಿದ ಮಂಚ ।
ಹುಣ್ಣಿಮೆಯ ಚಂದ್ರಮನ ಅಡ್ಡಗಟ್ಟುವ ಮಂಚ ॥
ಬಣ್ಣ ಬಿಳುಪಿನ ಮಂಚ ಹೊನ್ನು ಕಾದಿಹ ಮಂಚ ।
ಚೆನ್ನಿಗ ಪರೀಕ್ಷೀತನ ಪ್ರಾಣವ ಕೊಂಡ ಮಂಚ ೨

ಕಾಲಿಲ್ಲದೋಡುವ ಮಂಚ । ಗಾಳಿ ನುಂಗುವ ಮಂಚ ।
ನಾಲಿಗೆಯೆರಡುಳ್ಳ ವಿಷದ ಮಂಚ ॥
ಏಳು ಹೆಡೆಯ ಮಂಚ । ಮೂಲೋಕದೊಡೆಯನ ಮಂಚ ।
ಕಾಳಗದಲಿ ಕಿರೀಟಿಯ ಮುಕುಟಕೊಂಡ ಮಂಚ ೩

ಹಕ್ಕಿಗೆ ಹಗೆಯಾದ ಮಂಚ । ರೊಕ್ಕ ಮುಟ್ಟದ ಮಂಚ ।
ರಕ್ಕಸರೆದೆದಲ್ಲಣನ ಮಂಚ ॥
ಸೊಕ್ಕು ಪಿಡಿದ ಮಂಚ । ಫಕ್ಕನೆ ಪೋಗುವ ಮಂಚ ।
ಲಕ್ಕುಮಿ ರಮಣ ಶ್ರೀ ಹರಿಯ ಮಂಚ ೪

ಅಂಕುಡೊಂಕಿನ ಮಂಚ । ಅಕಲಂಕ ಮಹಿಮ ಮಂಚ ।
ಸಂಕರುಷಣನೆಂಬ ಸುಖದ ಮಂಚ ।
ಶಂಕರನ ಕೊರಳಿಗೆ ಪದಕವಾಗಿಹ ಮಂಚ ।
ವೆಂಕಟ ಪುರಂದರ ವಿಠಲ ರಾಯನ ಮಂಚ ೫

## ix. ನದಿ ದೇವತೆಗಳು

### ೨೧೨

ತುಂಗೆ ಮಂಗಳತರಂಗೆ ಹರಿಸರ್ವಾಂಗೇ ।
ಜಯಜಯ ಜಯತು ತುಂಗೆ ಪ

ಆದಿಯಲೊಬ್ಬ ದೈತ್ಯ ಮೇದಿನಿಯಕದ್ದೊಯ್ದು ।
ಸಾಧಿಸಿ ರಸಾತಳದಲ್ಲಿರಿಸೆ ॥
ಭೇದಿಸಿದವನ ನಾಸಿಕದಲ್ಲಿ ಪುಟ್ಟಿದೆ ।
ಆದಿವರಾಹನ ದಾಡೆಯಲಿ ಬಂದೆ ದೇವಿ ೧

ಜಲವೆಲ್ಲ ಹರಿಮಯ, ಶಿಲೆಯೆಲ್ಲ ಶಿವಮಯ ।
ಮಳಲುಮಿಟ್ಟಿಗಳೆಲ್ಲ ಮುನಿಮಯವು ॥
ಬೆಳೆದ ದರ್ಭೆಗಳು ಸಾಕ್ಷಾತು ಬ್ರಹ್ಮಮಯ ।
ನಳಿನನಾಳವು ಸರ್ವ ವಿಷ್ಣುಮಯ ೨

ಇದೆ ವೃಂಧಾವನ, ಇದೆ ಕ್ಷೀರಾಂಬುಧಿ ।
ಇದೆ ವೈಕುಂಠಕೆ ಸರಿಮಿಗಿಲೆನಿಸಿದೆ ॥
ಇದೆ ಬದರಿಕಾಶ್ರಮ, ಇದೆ ವಾರಣಾಸಿಗೆ,
ಅಧಿಕವೆಂದೆನಿಸಿದೆ ದೇವಿ ತುಂಗೆ ೩

ಧರೆಗೆ ದಕ್ಷಿಣವಾರಣಾಸಿಯೆಂದೆನಿಸಿದೆ ।
ಪರಮ ಪವಿತ್ರ ಪಾವನ ಚರಿತ್ರೆಯು ನಿನ್ನ ॥
ಸ್ಮರಣೆಮಾತ್ರದಿ ಕೋಟಿ ಜನ್ಮದಘವನಳಿವ ।
ಪರಮ ಸಾಯುಜ್ಯದ ಫಲವೀವ ದೇವಿ ೪

ಪರಮಭಕ್ತ ಪ್ರಹ್ಲಾದಗೊಲಿದು ಬಂದ ।
ಪರಮ ನರಸಿಂಹಕ್ಷೇತ್ರವೆಂದೆನಿಸಿ ಮೆರೆದೆ ॥
ಧರೆಯೊಳಧಿಕವಾದ ಕೂಡಲಿ ಪುರದಲಿ ।
ವರದ ಪುರಂದರ ವಿಠಲನಿರಲು ಬಂದೆ ೫

## ೨೧೩

ನೋಡುವ ಬನ್ನಿರಯ್ಯ ಪ

ಕಾವೇರಿಯ ಭವಹಾರಿಯ ।
ಮುಕ್ತಿಕಾರಿಯ ನೋಡುವ ಬನ್ನಿರಯ್ಯ ಅ.ಪ

ಮಾತೆಯ ನುತಜನಜಾತೆಯ ಹರಿಮನಃ ।
ಪ್ರೀತೆಯ ಭುವನವಿಖ್ಯಾತೆಯ ॥
ನೀತಿಯುನ್ನತಕರದಾತೆಯ ಶಿವನ ಸಂ–।
ಭೂತೆಯ ನೋಡುವ ಬನ್ನಿರಯ್ಯ ೧

ಬಂದು ಸಕಲ ಮುನಿವೃಂದ ನೆರೆಯೆ ಮಿಿಯ–।
ಲಂದು ನಾರದಮುನಿ ಪೊಗಳುತಿರೆ ॥
ಸಂದೇಹವಿಲ್ಲ ನೋಡಿದಡೆ ಮುಕುತಿಯಹು–।
ದೆಂದರೆ ಮುಳುಗಲದೇತಕಯ್ಯ? ೨

ಅರ್ಕಚಂದ್ರವಹ್ನಿಪುಷ್ಕರದೊಳು ಮಿಂದು ।
ಚಕ್ರತೀರ್ಥದೊಳಗೋಲಾಡಿ ॥
ಗಕ್ಕನೆ ಸದ್ಗತಿಯಹುದೆಂದು ಮನೆಗಳ ।
ಕಕ್ಕುಲತೆಯ ಬಿಟ್ಟು ನಡೆಯಿರಯ್ಯ ೩

ಕಂಡರೆ ಸಕಲ ಪಾತಕ ಪರಿಹಾರ, ಪಡೆ–।
ದುಂಡರೆ ದುರಿತ ದುರ್ಜನ ದೂರವು ॥
ಕೊಂಡಾಡಿದವರಿಗನಂತ ಫಲವು ನೀ–।
ರುಂಡರೆ ಭವಬಂಧ ಮೋಕ್ಷವಯ್ಯ ೪

ಗಂಗೆ–ಯಮುನೆಗೆ ಹೋದಡೆ ಮೂರೈದುದಿ–।
ನಂಗಳಿಗಹುದು ಮುಕುತಿಯೆಂದಡೆ ॥
ಹಿಂಗದೆ ಕಾವೇರಿಯ ನೋಡಿದಾಕ್ಷಣ ಪಾ–।
ಪಂಗಳಿರದೋಡಿ ಪೋಪುವಯ್ಯ ೫

ಯಾಗಾದಿ ಸ್ವರ್ಗಯೋಗದಿ ಪೊಕ್ಕು ಕಾಶಿಯೊಳು ।
ಆಗಲೆ ತನುವ ಬಿಡಲು ಮುಕುತಿ ।
ಭೋಗಿಶಯನನ ದಿನದಲಿ ಕಾವೇರಿಗೆ ।
ಹೋಗಿ ಮಿಂದವರಿಗಿದೇ ಗತಿಯಯ್ಯ ೬

ಕಾವೇರಿಯ ಗಾಳಿ ಸೋಕಿದ ದೇಶದೊ–
ಳಾವಾವ ಮನುಜರು ಸುಕೃತಿಗಳೇ ॥
ಕಾವೇರಿಯ ತೀರವಾಸಿಗಳಿಗೆ ಮುಕ್ತಿ
ಆಹೋದು ಸಂದೇಹವಿಲ್ಲವಯ್ಯ ೭

ಆವಾವ ಜನ್ಮಕರ್ಮಂಗಳು ಸವೆವರೆ
ಕಾವೇರಿಯ ಕಾಡು ಸುಖಬಾಳಿರೈ ॥
ಶ್ರೀವರ ಸ್ವಾಮಿ ಶ್ರೀ ಪುರಂದರವಿಠಲನ
ಸೇವೆಯೊಳನುದಿನವಿಪ್ಪುದಯ್ಯ ೮

## ೨೧೪

ಭಾಗೀರಥೀದೇವಿ ಭಯನಿವಾರಣೆ ಗಂಗೆ ।
ಸಾಗರನ ನಿಜರಾಣಿ ಸಕಲಕಲ್ಯಾಣಿ ಪ

ಒಮ್ಮೆ ಶ್ರೀಹರಿ ಪಾದಕಮಲದಿಂದುದುಭವಿಸಿ ।
ಬ್ರಹ್ಮಕರ ಪಾತ್ರೆಯಲಿ ನಿಂದು ಬಂದೆ ॥
ಶ್ರೀಮನ್ನಾರಾಯಣನ ಪಾದತೀರ್ಥವಾಗಿ ।
ಬೊಮ್ಮಾಂಡವನು ಪಾವನಮಾಡ ಬಂದೆ ೧

ದೇವಿ ನೀ ವಿಷ್ಣುಪಾದೋದಕವೆಂದೆನಿಸಿ ।
ದೇವತೆಗಳಿಗೆಲ್ಲ ಅಧಿಕವಾದೆ ॥
ದೇವರೆಲ್ಲರು ನೆರೆದು ತಲೆಬಾಗಿದರು ಮಹಾ–।
ದೇವನ ಶಿರದಿಂದ ಧರೆಗಿಳಿದು ಬಂದೆ ೨

ಜಹ್ನುವಿನುದರದಿ ಪೊಕ್ಕ ಕಾರಣದಿಂದ ।
ಜಾಹ್ನವಿಯೆಂದು ನೀನೆನಿಸಿಕೊಂಡೆ ॥
ಮುನ್ನ ನರಕಕ್ಕಿಳಿದ ಸಗರರಾಯನ ವಂಶ– ।
ವನ್ನು ಪಾವನಮಾಡಿ ಪೊರೆಯಲು ಬಂದೆ ೩

ನಿಟ್ಟಿಸಲು ಮುನ್ನಾರು ಜನ್ಮಪಾತಕಹರಣ ।
ದಿಟ್ಟಿಸಲು ಮೂರುಜನ್ಮದಿ ಮುಕುತಿಯು ॥
ಮುಟ್ಟಿ ಮಾಡಿದರೊಂದು ಸ್ನಾನಮಾತ್ರದಲಿ ।
ಸುಟ್ಟು ಹೋಹುದು ಸಾಸಿರಜನ್ಮ ಪಾಪ ೪

ಹಲವು ಪರಿಯಲಿ ಹರಿಯ ಸ್ಮರಣೆಯಿಲ್ಲದೆ ಭವ–।
ದೊಳಗೆ ಸಿಲುಕಿ ಕಡುನೊಂದೆ ನಾನು ॥
ಹಲವು ಮಾತೇಕೆ ಶ್ರೀ ಪುರಂದರವಿಠಲನ ।
ಚೆಲುವಪದದಿಂದಿಳಿದು ಒಲಿದು ದಯಮಾಡೆ ೫

## V. ಆತ್ಮ ನಿವೇದನೆ

### ೨೧೫

ಅಗಲಿ ಸೈರಿಸಲಾರದೀ ಮನ ।
ಅಗಲದಿಪ್ಪುದೆ ಜೀವನ ॥
ಪೊಗರೊಗೆವ ನಗೆಮೊಗದ ಸೊಬಗಿನ ।
ಸುಗುಣಸಿರಿ ಗೋಪಾಲನ ಪ

ಮುನ್ನ ಸಂಸ್ಕೃತಿಪಾಶದೊಳು ಬಿದ್ದನ್ಯಥಾರಕ್ಷಕರ ಕಾಣದೆ ।
ಬನ್ನಬಡುತಿಹ ಜನರನೀಕ್ಷಿಸಿ ಪೂರ್ಣ ಕರುಣಕಟಾಕ್ಷದಿ ॥
ತನ್ನ ನಾಮದ ಸುಧೆಯನುಣ್ಣಿಸಿ ತನ್ನ ಭಜನೆಯ
ಸುಖವ ತೋರಿಸಿ ।
ತನ್ನ ದಾಸರ ಮಾಡಿಕೊಂಡಿಹ ಚೆನ್ನಸಿರಿಗೋಪಾಲನ ೧

ಶೀಲಗುಣ ಕಥನಗಳನರಸದೆ ಕೀಳು ಚಾರಿತ್ರ್ಯಗಳ ಬಗೆಯದೆ ।
ಲೋಲಚಿತ್ತದಿ ಮಾಡುತಿಹ ಅಘಜಾಲ ಕೋಟಿಗಳೆಣಿಸದೆ ॥
ಕಾಲದಿಂ ಬಹುನಂಬಿದವರನು ಲೀಲೆಯಿಂದಭಿಮಾನಿಸುತ ಪರಿ।
ಪಾಲಿಸುತ್ತಿಹ ಮಂಗಳಾತ್ಮಕ ಶೀಲಕಂಠಮೂರ್ತಿಯ ೨

ಭಕ್ತಿ ಕರ್ಮಜ್ಞಾನ ಯೋಗ ವಿರಕ್ತಿಯೆಂಬುದನೇನು ಕಾಣದೆ ।
ಮತ್ತೆ ಕೇವಲ ಮೂಢಭಾವದ ಚಿತ್ತದಲಿ ನೆರೆ ನಂಬಿದ ॥
ಆರ್ತರನು ಅಬಲರ ಅನಾಥರ ಮೃತ್ಯುಮುಖದಿಂದವರ
ತಾನೊಲಿ–।
ದೆತ್ತಿ ಸಲಹುತಲಿಪ್ಪ ಸೊಬಗಿನ ಕೀರ್ತಿವಂತ ಮಹಾತ್ಮನ ೩

ಕರುಣದಿಂದೆಳಗಂದಿ ಕರುವಿನ ಮೊರೆಯ ಲಾಲಿಸಿ ಬಿಡದೆ ತೃಪ್ತಿಯ ।
ಕರೆದು ಮಾಡುವ ಪರಿಯೆ ತನ್ನಯ ಸ್ಮರಿಸುತಿಹ ಕಡುದೀನರ ॥
ಹೊರಗೆ ಶಿಕ್ಷಿಸಿ ಒಳಗೆ ರಕ್ಷಿಸಿ ಪಿರಿದು ತನ್ನಯ ನಿಜವನವರಿಗೆ ।
ತೋರುವ ಕರುಣಾಳುಗಳ ದೇವನ ಶರಣಜನ ಮಂದಾರನ ೪

ನೇಮದಲಿ ನಂಬಿದರ್ಗೆ ಸೂಚಿಸಿ ಕಾಮವಾಸನೆಗಳನು ಖಂಡಿಸಿ ।
ಪಾಮರರ ಪಂಡಿತರ ಮಾಡಿ ಮಹಾಮಹಿಮೆಗಳ ತಿಳಿಸುತ ॥
ರಾಮರಮಣಿಯ ಸಹಿತ ಸಾಲಿಗ್ರಾಮದಲಿ ನೆರೆ ನೆಲಸಿ ಭಕುತರ ।
ಪ್ರೇಮದಿಂದಲಿ ಪೊರೆಯುತಿಹ ಸುಖಧಾಮ ಪುರಂದರವಿಠಲನ ೫

## ೨೧೬

ಅಂಜಲೇತಕೆ ಮನವೆ ಅನುಗಾಲವು
ಕಂಜನಾಭನ ಭಕುತಿ ಕೈಕೊಂಡ ಬಳಿಕ ಪ

ನಾರಾಯಣನೆಂಬ ನಾಲ್ಕು ಅಕ್ಷರದಿಂದ
ಘೋರಪಾಪವನೆಲ್ಲ ಕಳೆಯಬಹುದು ॥
ಶ್ರೀರಾಮನಾಮವೆಂಬ ಸಿಂಗಾಡಿ ತಕ್ಕೊಂಡು
ವೈರಿಷಡ್ವರ್ಗಗಳ ವಧೆ ಮಾಡಬಹುದು ೧

ಶ್ರೀ ಕೇಶವನೆ ಎಂಬ ಸಿದ್ಧ ಮಂತ್ರಗಳಿಂದ
ಕಾಕು ಕರ್ಮಗಳನ್ನು ಕಳೆಯಬಹುದು ॥
ವೈಕುಂಠಪತಿ ಎಂಬ ವಜ್ರವನೆ ತಕ್ಕೊಂಡು
ನೂಕಿ ಯಮಬಂಟರನು ನುಗ್ಗು ಮಾಡಲುಬಹುದು ೨

ಹರಿ ವಾಸುದೇವನೆಂಬ ಅಮೃತಪಾನಗಳಿಂದ
ಮರಣ ಜನನಗಳೆರಡ ಜಯಿಸಬಹುದು ॥
ಅರಿತರೆ ಮನದೊಳಗೆ ಪುರಂದರವಿಠಲನ
ಸರಸ ಸದ್ಗತಿಯನ್ನು ಸವಿಗಾಣಬಹುದು ೩

## ೨೧೭

ಅಂದಿಂದ ನಾ ನಿನ್ನ ನೆರೆ ನಂಬಿದೆನೊ ಕೃಷ್ಣ
ತಂದೆ ಗೋವಿಂದ ಮುಕುಂದ ನಂದನ ಕಂದ ಪ

ಬಲವಂತ ಉತ್ತಾನಪಾದರಾಯನ ಕಂದ
ಮಲತಾಯಿ ನೂಕಲು ಅಡವಿಯೊಳು ॥
ಜಲಜಾಕ್ಷ ನಿನ್ನ ಧ್ಯಾನದಿ ತಪವಿರಲಾಗಿ
ಒಲಿದು ಧ್ರುವಗೆ ಪಟ್ಟಕಟ್ಟಿದ್ದ ಕೇಳಿ ೧

ನಕ್ರನಿಗೆ ಗಜರಾಜ ಸಿಕ್ಕಿ ಸರಸಿಯೊಳು
ದುಃಖದಿ ಶ್ರೀಹರಿ ಸಲಹೆನ್ನಲು ॥
ಚಕ್ರದಿ ನೆಗಳ ಕಂಠವ ತರಿದು ಭಕ್ತನ
ಅಕ್ಕಸ ಪರಿದಾದಿಮೂಲನೆಂಬುದ ಕೇಳಿ ೨

ದ್ರುಪದನ ಸುತೆಯ ದುಶ್ಶಾಸನ ಸಭೆಯೊಳು
ಕಪಟದಿ ಸೀರೆಯ ಸೆಳೆಯುತಿರೆ ॥
ಸುಪರ್ಣವಾಹನ ಕೃಷ್ಣ ಸಲಹೆಂಬಬಲೆಯನು
ಅಪಮಾನದಿಂದ ಕಾಯ್ದ ಹರಿಯೆಂಬುದನು ಕೇಳಿ ೩

ಹರಿನಾರಾಯಣನೆಂದು ಪ್ರಹ್ಲಾದ ಬರೆಯಲು
ದುರುಳ ದಾನವ ಅವನಿಗೆ ಮುನಿದು ॥
ಕರೆ ನಿನ್ನ ಒಡೆಯನ ಎಂದು ಗರ್ಜಿಸೆ ನರ
ಹರಿ ಬಂದು ಒಡನೆಯೆ ಕಾಯ್ದನೆಂಬುದ ಕೇಳಿ ೪

ಅಂಬರೀಷಗೆ ದೂರ್ವಾಸ ಶಾಪವ ಕೊಡೆ
ಅಂಬುಜಲೋಚನ ಚಕ್ರದಿಂದ ॥
ಬೆಂಬತ್ತಿ ಮುನಿಯ ಶಾಪವ ಪರಿಹರಿಸಿದ
ಕಂಬು ಚಕ್ರಧರ ಹರಿಯೆಂಬುದ ಕೇಳಿ ೫

ಛಲಬೇಡ ರಾಮನ ಲಲನೆಯ ಬಿಡು ಎಂದು
ತಲೆಹತ್ತರವಗೆ ಪೇಳಲು ತಮ್ಮನ ॥
ಬಳಲಿಸಿ ಹೊರಡಿಸೆ ಅವ ನಿನ್ನ ಮರೆಹೊಗಲು
ಸಲೆ ವಿಭೀಷಣಗೆ ಲಂಕೆಯನಿತ್ತುದನು ಕೇಳಿ ೬

ಸುರ ನರ ನಾಗಲೋಕದ ಭಕ್ತ ಜನರನು
ಪೊರೆಯಲೋಸುಗ ವೈಕುಂಠದಿಂದ ॥
ಸಿರಿಸಹಿತದಿ ಬಂದು ಶೇಷಾಚಲದಿ ನಿಂತ
ಪುರಂದರವಿಠಲ ನಿನ್ನಯ ಚರಣವ ಕಂಡು ೭

## ೨೧೮

ಅಪಮಾನವಾದರೆ ಒಳಿತು ।
ಅಪರೂಪ ಹರಿನಾಮ ಜಪಿಸುವ ಮನುಜಗೆ ಪ

ಮಾನದಿಂದಲಿ ಅಭಿಮಾನ ಪುಟ್ಟುವುದು ।
ಮಾನದಿಂದಲಿ ತಪ ಹಾನಿಯಾಗುವುದು ॥
ಮಾನಿ ಕೌರವನಿಗೆ ಹಾನಿಯಾಯಿತು ಅನು–।
ಮಾನವಿಲ್ಲವು ಮಾನ ಅಪಮಾನ ಸಮರಿಗೆ ೧

ಅಪಮಾನದಿಂದಲಿ ತಪವೃದ್ಧಿಯಾಹುದು ।
ಅಪಮಾನದಿಂ ಪುಣ್ಯ ಸಫಲವಾಗುವುದು ॥
ಅಪಮಾನದಿಂದಲಿ ನೃಪ ಧ್ರುವರಾಯಗೆ ।
ಕಪಟನಾಟಕ ಕೃಷ್ಣ ಅಪರೋಕ್ಷನಾದನು ೨

ನಾನೇನ ಮಾಡಲಿ ಆರಲ್ಲಿ ಪೋಗಲಿ ।
ಕಾನನಚರರಾರಾಧ್ಯ ನೀನಿರಲು ॥
ದೀನರಕ್ಷಕ ನಮ್ಮ ಪುರಂದರವಿಠಲನೆ ।
ಏನು ಬೇಡೆನಗಪಮಾನವೆ ಇರಲಿ ೩

## ೨೧೯

ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ ।
ಕಪಟನಾಟಕಸೂತ್ರಧಾರಿ ನೀನೆ ಪ

ನೀನು ಆಡಿಸಲು ಜಡವೊನಕೆ ಅಭಿನಯಬೊಂಬೆ
ಏನು ಬಲ್ಲದು ಬೇರೆ ಕೃತಿಯನೊಂದ ॥
ನೀನಿಟ್ಟ ಸೂತ್ರದಿಂದಲುಗೆ ಕೈಕಾಲುಗಳು ।
ನೀನೆ ಮಗ್ಗಿಸಲು ಮಗ್ಗುವ ದೇಹ ತಾನಾಗೆ ೧

ಒಂದೆಂಟು ಬಾಗಿಲುಗಳುಳ್ಳ ಪಟ್ಟಣಕೆ ತನ-
ಗೆಂದು ಇಪ್ಪತ್ತಾರು ಮನೆಯಾಳ್ಗಳ ॥
ತಂದು ಕಾವಲುನಿಲಿಸಿ ಎನ್ನ ನೀನೊಳಗಿಟ್ಟು
ಮುಂದೆ ಭವಭವದಿ ದಣಿಪುದು ನಿನ್ನದನ್ಯಾಯ ೨

ಯಂತ್ರವಾಹಕ ನೀನೆ ಒಳಗೆ ಇದ್ದೂ ಎನ್ನಸ್ವ
ತಂತ್ರನೆಂದೆನಿಸಿ ಕೊಲಿಸುವರೆ ಹೇಳೊ ॥
ಕಂತುಪಿತ ಲಕ್ಷ್ಮೀಶ ಎಂತಾದಡಂತಹುದ
ನಂತ ಮೂರುತಿ ನಮ್ಮ ಪುರಂದರ ವಿಠಲ ೩

## ೨೨೦

ಆಗಲೆ ಕಾಯಬೇಕು ಅಂಬುಜಾಕ್ಷನೆ ಎನ್ನ ।
ಈಗ ನೀ ಕಾಯ್ದರೇನು ಕಾಯದಿದ್ದರೇನು ಪ

ಹೊನ್ನು ಹಣ ಎನಗುಂಟು ಹೆಸರಾದ ಮನೆಯುಂಟು ।
ಚಿನ್ನ-ಚೀನಾಂಬರವುಂಟು ಚೆಲುವುಪ್ಪರಿಗೆಯುಂಟು ॥
ಮೊನ್ನೆ ಹುಟ್ಟಿದ ಗಂಡು ಮಗು ಒಂದು ಎನಗುಂಟು ।
ಸನ್ನೆ ಶಕ್ತಿಗುಂದಿದಾಗ ಸಂಗಡಲೊಬ್ಬರ ಕಾಣೆ ೧

ನಂಟರಿಷ್ಟರು ಉಂಟು ನೆರೆ-ಹೊರೆ ಎನಗುಂಟು ।
ಎಂಟು ಭಾಗ್ಯಗಳುಂಟು ಬಂದು ಹೋಗುವರುಂಟು ॥
ಕಂಠಕೆ ಹೊದ್ದಿದ ಕಾಂತೆಯರೆನಗುಂಟು ।
ಒಂಟಿಯಾಗಿ ಹೋಗುವಾಗ ಸಂಗಡೊಬ್ಬರನು ಕಾಣೆ ೨

ಒಂದು ಕ್ಷಣ ಮೊದಲಾದ ವಾತ ಘಾತಗಳಿಂದ ।
ಅಂದಿನ ವ್ಯಾಧಿಗಳು ಬಾಧಿಸುತಿರಲು ॥
ಇಂದಿರೇಶನೆ ನಿನ್ನ ಸಂಗವೆಲ್ಲವಿ ಬಿಟ್ಟೆ ।
ಬಂದಿನ್ನು ಕಾಯಬೇಕೊ ಪುರಂದರವಿಠಲ ೩

## ೨೨೧

ಆದದ್ದೆಲ್ಲ ಒಳತೇ ಆಯಿತು ನಮ್ಮ । · ಪ

ಶ್ರೀಧರನ ಸೇವೆಯ ಮಾಡಲು ।
ಸಾಧನ ಸಂಪತ್ತಾಯಿತು ಅ.ಪ

ದಂಡಿಗೆ ಬೆತ್ತ ಹಿಡಿಯುವುದಕ್ಕೆ ।
ಮಂಡೆ ತಗ್ಗಿಸಿ ನಾಚುತಲಿದ್ದೆ ॥
ಹೆಂಡತಿ ಸಂತತಿ ಸಾವಿರವಾಗಲಿ ।
ದಂಡಿಗೆ ಬೆತ್ತ ಹಿಡಿಸಿದಳಯ್ಯ ೧

ಗೋಪಾಳ ಬುಟ್ಟಿ ಹಿಡಿಯುವುದಕ್ಕೆ ।
ಭೂಪತಿಯಂತೆ ನಾಚುತಲಿದ್ದೆ ॥
ಆ ಪತ್ನಿಯು ತಾ ಪ್ರೀತಿಯಿಂದಲಿ ।
ಗೋಪಾಳ ಬುಟ್ಟಿಯ ಹಿಡಿಸಿದಳಯ್ಯ ೨

ತುಳಸಿಮಾಲೆಯ ಹಾಕುವುದಕ್ಕೆ ।
ಅಲಸಿಕೊಂಡು ನಡೆಯುತಲಿದ್ದೆ ॥
ಜಲಜಾಕ್ಷಿಯು ಶ್ರೀ ಪುರಂದರವಿಠಲ ।
ತುಳಸಿ । ಮಾಲೆಯ ಹಾಕಿಸಿದಳು ೩

## ೨೨೨

ಆರು ಬದುಕಿದರಯ್ಯ ಹರಿ ನಿನ್ನ ನಂಬಿ
ತೋರೋ ಈ ಜಗದೊಳಗೆ ಒಬ್ಬರನು ಕಾಣೆ ಪ

ಕಲಹಬಾರದ ಹಾಗೆ ಕರ್ಣನನು ನೀ ಕೊಂದೆ
ಸುಲಭದಲಿ ಕೌರವರ ಮನೆಯ ಮುರಿದೆ ॥
ನೆಲನ ಬೇಡಲು ಪೋಗಿ ಬಲಿಯ ತಲೆಯನು ತುಳಿದೆ
ಮೊಲೆಯನುಣಿಸಲು ಬಂದ ಪೂತನಿಯ ಕೊಂದೆ ೧

ಕರಪತ್ರದಿಂದ ತಾಮ್ರಧ್ವಜನ ತಂದೆಯನು
ಕೊರಳ ಕೊಯಿಸಿದೆ ನೀನು ಕುಂದಿಲ್ಲದೆ ॥
ಮರುಳನಂದದಿ ಪೋಗಿ ಭೃಗುಮುನಿಯ ಕಣ್ಣೊಡೆದೆ
ಅರಿತು ನರಕಾಸುರನ ಹೆಂಡಿರನು ಬೆರೆದೆ ೨

ತಿರಿದುಂಬ ದಾಸರ ಕೈಲಿ ಕಪ್ಪವ ಕೊಂಬೆ
ಗರುಡವಾಹನ ನಿನ್ನ ಚರಿಯವರಿಯೆ ॥
ದೊರೆ ಪುರಂದರ ವಿಠಲ ನಿನ್ನನ್ನು ನಂಬಿದರೆ
ತಿರುಪೆಯೂ ಹುಟ್ಟಲೊಲ್ಲದು ಕೇಳೊ ಹರಿಯೆ ೩

## ೨೨೩

ಆರು ಬಾರರು ಸಂಗಡಲೊಬ್ಬರು ।
ನಾರಾಯಣನ ದಿವ್ಯನಾಮ ಒಂದಲ್ಲದೆ ಪ

ಹೊತ್ತು ನವಮಾಸ ಪರಿಯಂತ ಗರ್ಭದಲಿ ।
ಅತ್ಯಂತ ನೋವು ಬೇನೆಗಳ ತಿಂದು ॥
ತುತ್ತು ಬುತ್ತಿಯ ಕೊಟ್ಟು ಸಲಹಿದ ತಾಯಿಯು ।
ಅತ್ತು ಕಳುಹುವಳಲ್ಲದೆ ಸಂಗಡ ಬಾಹಳೆ ೧

ನೆರೆದಿದ್ದ ಪುರಜನ ವಿಪ್ರರಗ್ನಿಯ ಸಾಕ್ಷಿ ।
ಕರವಿಡಿದು ಕೈಧಾರೆ ಎರೆಸಿಕೊಂಡ ॥
ತರುಣಿ ತನ್ನಯ ಗಂಡನನು ಮುಟ್ಟಲಮ್ಮದೆ ।
ನೆರೆ ಏನು ಗತಿ ತನಗೆ ಹೇಳೆಂಬಳಲ್ಲದೆ ೨

ಮನೆ–ಮಕ್ಕಳಿವರೆನ್ನ ತನುವು ಒಡವೆ ಎರಡು ।
ಘನವಾಗಿ ನಂಬಿರೆ ನನ್ನವೆಂದು ।
ಅನುಮಾನವೇತಕೆ ಜೀವ ಹೋದಬಳಿಕ ।
ಘನಹೊತ್ತು ಮನೆಯಲಿ ಇರಿಸಿಕೊಳ್ಳರೊ ದೇವ ೩

ಆತ್ಮ ಬಳಲಿದಾಗ ಬಂಧುಗಳು ಬಂದು ।
ಹೊತ್ತು ಹೊರಗೆ ಹಾಕು ಎಂತೆಂಬರು ॥
ಹೊತ್ತುಕೊಂಡು ಹೋಗಿ ಅಗ್ನಿಯಲ್ಲಿ ಬಿಸುಟು ।
ಮತ್ತೆ ಬೆನ್ನನು ತಿರುಗದಲೆ ಬಾಹೋರಲ್ಲದೆ ೪

ಹರಣ ಹೋಗದ ಮುನ್ನ ಹರಿಯ ಸೇವೆ ಮಾಡಿ ।
ಪರಲೋಕ ಸಾಯುಜ್ಯ ಪಡೆದುಕೊಂಡು ।
ಕರುಣಿ ಕೃಪಾಳು ಶ್ರೀ ಪುರಂದರವಿಠಲನ ।
ನೆರೆನಂಬಿ ಭಜಿಸಿ ನೀ ಸುಖಿಯಾಗೊ ಮನುಜಾ ೫

## ೨೨೪

ಆರಿದ್ದರೇನಯ್ಯ ನೀನಲ್ಲದೆನಗಿಲ್ಲ
ಕಾರುಣ್ಯ ನಿಧಿ ಹರಿಯೆ ಕೈಯ ಬಿಡಬೇಡ ಪ

ದುರುಳ ಕೌರವನಂದು ದ್ರುಪದಜೆಯ ಸೀರೆಯನು
ಕರದಿಂದ ಸೆಳೆಯುತಿರೆ ಪತಿಗಳೆಲ್ಲ ॥
ಗರ ಹೊಯ್ದರಂತಿದ್ದರಲ್ಲದೇ ನರಹರಿಯೆ
ಕರುಣದಿಂ ನೀನಲ್ಲದಾರು ಕಾಯ್ದವರು ೧

ಅಂದು ನೆಗಳಿನ ಬಾಧೆಯಿಂದ ಗಜರಾಜನನು
ತಂದೆ ನೀ ವೈಕುಂಠದಿಂದ ಬಂದು ॥
ಇಂದಿರೇಶನೆ ಚಕ್ರದಿಂದ ನೆಗಳಿನ ಬಾಯ
ಸಂಧಿಯನು ಸೀಳಿ ಪೊರೆದೆಯೆಲೊ ನರಹರಿಯೇ ೨

ಅಜಮಿಳನು ಕುಲಗೆಟ್ಟು ಕಾಲದೂತರು ಬರಲು
ನಿಜಸುತನ ಕರೆಯಲವನತಿ ವೇಗದಿ ॥
ತ್ರಿಜಗದೊಡೆಯನೆ ಪುರಂದರ ವಿಠಲ ಕರುಣದಲಿ
ನಿಜದೂತರನು ಕಳುಹಿ ಕಾಯ್ದೆ ಗಡ ಹರಿಯೇ ೩

## ೨೨೫

ಇನ್ನೂ ದಯ ಬಾರದೇ–ದಾಸನ ಮೇಲೆ–
ಇನ್ನೂ ದಯ ಬಾರದೇ ಪ

ಮುನ್ನ ಮಾಡಿದ ದುಷ್ಕರ್ಮಗಳೆಲ್ಲವ
ಮನ್ನಿಸಿ ಕಳೆವುದು ಇಂದಿರೆಯ ರಮಣಾ ಅ.ಪ

ನಾನಾ ಜನ್ಮಗಳಲಿ ನಾನಾ ಜಾತಿಗಳಲಿ
ನಾನಾ ಯೋನಿಗಳಲಿ ಜನಿಸಿ ಜನಿಸಿ ದೇವಾ ॥
ನಾನು ನನ್ನದು ಎಂದು ನರಕದೊಳಗೆ ಬಿದ್ದು
ನೀನೆ ಗತಿಯೆಂದು ಸ್ಮರಣೆ ಮಾಡಿದ ಮೇಲೆ ೧

ಕಾಮಾದಿ ಷಡುವರ್ಗ ಗಾಢಾಂಧಕಾರದಿ
ಪಾಮರನಾಗಿ ಇದ್ದಂಥ ಪಾತಕನ ॥
ರಮಾಮನೋಹರ ಹರಿ ನೀನೇ ಗತಿಯೆಂದು
ನಾಮಾಮೃತವನು ಪಾನ ಮಾಡಿದ ಮೇಲೆ ೨

ಏನ ಓದಿದರೇನು ಏನ ಕೇಳಿದರೇನು
ಈ ನಾಮ ಸ್ಮರಣೆಗೆ ಸರಿಬಾರದು ॥
ಜ್ಞಾನಹೀನನ ಮೇಲೆ ದಯವಿಟ್ಟು ಪಾಲಿಸು
ದೀನ ದಯಾಕರ ಪುರಂದರ ವಿಠಲನೆ ೩

## ೨೨೬

ಇನ್ನೇನು ಗತಿ ಎನಗೆಲೊ ಹರಿಯೆ ।
ನಿನ್ನನು ನೆನೆಯದೆ ಮೋಸಹೋದೆನಲ್ಲ ಪ

ಅಂಕದೊಳಾಡುವ ಶಿಶುವಿನ ಮುದ್ದಿನ ।
ಬಿಂಕದ ನುಡಿಗಳ ಕೇಳುತಲಿ ॥
ಕಿಂಕಿಣಿ ಧ್ವನಿಯನು ಕಿವಿಗೊಟ್ಟು ಕೇಳುತ ।
ಮಂಕು ಹರಿಣನಂತೆ ಆದೆನಲ್ಲ ೧

ಪರವನಿತೆಯರ ಲಾವಣ್ಯಕೆ ಲೋಚನ ।
ಚರಿಸುತಲವರ ಕೂಟಕೆ ಬೆರಸಿ ॥
ಉರಿವ ಕಿಚ್ಚು ತನಗೆ ಹಿತವೆಂದು ಅದರೊಳು ।
ಎರಗಿದ ಪತಂಗದಂತಾದೆನಲ್ಲ ೨

ತೊಡೆಯೆಡೆ ಗುಹ್ಯಕಾಂಬೆನೊ ಕಾಣೆನೋ ಎಂದು ।
ಮಡದಿಯರಂಗಸಂಗವ ಮಾಡುತ ॥
ಒಡಲ ತೀಟಕೆ ಪೋಗಿ ಬಡಿಗಲ್ಲ ಕೆಡಹಿಕೊಂ–।
ಡಡಗಿದ ಮೂಷಕನಂತಾದೆನಲ್ಲ ೩

ಸಲೆ ನಿಜವೃತ್ತಿಯ ಬಿಟ್ಟು ಪರಾನ್ನವ ।
ನಲಿದುಂಡು ಹೊಟ್ಟೆಯ ಹೊರೆಯುತಲಿ ॥
ಬಲೆಯ ತುದಿಯ ಮಾಂಸಕೆ ಬಂದೆರಗುತ ।
ಸಿಲುಕಿದ ಮೀನಿನಂತಾದೆನಲ್ಲ ೪

ಲಂಪಟನಾಗಿ ನಾರಿಯರ ಮುಖಾಬ್ಜದ ।
ಸೊಂಪಿನ ಕಂಪನಾಘ್ರಾಣಿಸುತ ॥
ಸಂಪಿಗೆ ಹೂವಿನ ಮೇಲೆ ಮಲಗಿ ತನ್ನ
ಸೊಂಪಳಿದಳಿಯಂತೆ ನಾನಾದೆನಲ್ಲ ೫

ಇಂತು ಪಂಚೇಂದ್ರಿಯ ತಮತಮ್ಮ ವಿಷಯಕೆ
ಮುಂತಾಗಿ ತಮ್ಮ ತಾವಲೆಯುತಿರೆ ॥
ಸಂತತ ತಮತಮ ವಿಷಯಕೆ ಎಳಸಲು
ಕಾಂತಾರದರಸನಂತೆ ಆದೆನಲ್ಲ ೬

ಕಂದರ್ಪಲೀಲೆಯ ಗೆಲಿದುಳ್ಳ ಭಕ್ತಿಯ ।
ತಂದು ಪಂಚೇಂದ್ರಿಯಗಳಿಗೆನ್ನಯ ॥
ತಂದೆ ಪುರಂದರ ವಿಠಲನ ನೆನೆದರೆ ।
ಎಂದೆಂದಿಗೂ ಭವಬಂಧನ ಬಾರದಲ್ಲ ೭

## ೨೨೭

ಇಲ್ಲಿರಲಾರೆ ಅಲ್ಲಿಗೆ ಪೋಗಲಾರೆ ।
ಫುಲ್ಲನಾಭನೆ ನೀನಿದ್ದಲ್ಲಿ ಇರಿಸೆನ್ನ ಪ

ಮರಳಿ ಮರಳಿ ಜನ್ಮ ಮರಣವನೊಲ್ಲೆ ।
ದುರಿತ ಕೋಟಲೆಯ ಸಂಸಾರವನೊಲ್ಲೆ ॥
ತುರುಕಾದು ಕೊಳಲನೂದುವ ಮುರಮರ್ದನ ।
ಚರಣಕಮಲಗಳ ಸ್ಮರಣೆಯೊಳಿರಿಸೆನ್ನ ೧

ಬಂದು ಸಂಸಾರದ ಬೇನೆಯೊಳಗೆ ಬಿದ್ದು ।
ನೊಂದೆನು ಕಡುಮೋಹದಿಂದ ನಾ ಬೆಂದು ॥
ನಂದಗೋಪನ ಕಂದ ವೃಂದಾವನಪ್ರಿಯ ।
ಎಂದೆಂದು ತವಪಾದ ಸ್ಮರಣೆಯೊಳಿರಿಸೆನ್ನ ೨

ಪುತ್ರ–ಪೌತ್ರರು ಬಂಧು–ಮಿತ್ರ ಬಾಂಧವರೆಂದು ।
ಕತ್ತಲೆಯೊಳು ಕಡುನೊಂದೆನಯ್ಯ ॥
ಸತ್ಯಮೂರುತಿ ಶ್ರೀ ಉಡುಪಿಯ ಶ್ರೀ ಕೃಷ್ಣ ।
ಭಕ್ತವತ್ಸಲ ಶ್ರೀ ಪುರಂದರವಿಠಲ ೩

## ೨೨೮

ಇಷ್ಟುಪಾಪವನು ಮಾಡಿದುದೆ ಸಾಕೊ ।
ಸೃಷ್ಟಿಗೀಶನೆ ಎನ್ನನುದ್ಧರಿಸಬೇಕೊ ಪ

ಒಡಲಕಿಚ್ಚಿಗೆ ಪರರ ಕಡು ನೋಯಿಸಿದೆ ಕೃಷ್ಣ ।
ಕೊಡದೆ ಅನ್ಯರ ಋಣವನಪಹರಿಸಿದೆ ।
ಮಡದಿಯ ನುಡಿ ಕೇಳಿ ಒಡಹುಟ್ಟಿದವರೊಡನೆ ।
ಹಡೆದ ತಾಯಿಯ ಕೂಡ ಹಗೆ ಮಾಡಿದೆ ೧

ಸ್ನಾನ ಸಂಧ್ಯಾನ ಜಪ ಮಾಡದಲೆ ಮೈಗೆಟ್ಟೆ ।
ಜ್ಞಾನಮಾರ್ಗವನಂತು ಮೊದಲೆ ಬಿಟ್ಟೆ ॥
ಏನ ಹೇಳಲಿ ಪರರ ಮಾನಿನಿಗೆ ಮನಸಿಟ್ಟೆ ।
ಶ್ವಾನ ಸೂಕರನಂತೆ ಹೊರೆದೆ ಹೊಟ್ಟೆ ೨

ವ್ರತ ನೇಮ ಉಪವಾಸ ಒಂದು ದಿನ ಮಾಡಲಿಲ್ಲ ।
ಅತಿಥಿಗಳಿಗನ್ನವನು ನೀಡಲಿಲ್ಲ ।
ಶ್ರುತಿ ಶಾಸ್ತ್ರ ಪುರಾಣ ಕಥೆಗಳನು ಕೇಳಲಿಲ್ಲ ।
ವೃಥವಾಗಿ ಬಹುಕಾಲ ಕಳೆದನಲ್ಲ ೩

ಶುದ್ಧ ವೈಷ್ಣವ ಕುಲದಿ ಉದ್ಭವಿಸಿದೆನೋ ನಾನು ।
ಮಧ್ವ ಮತಸಿದ್ಧಾಂತ ಪದ್ಧತಿಗಳ ॥
ಬುದ್ಧಿಪೂರ್ವಕ ತಿಳಿದು ಪದ್ಮನಾಭನ ದಿನದಿ ।
ಕದ್ದುಂಡು ಕಾಯವನು ವೃದ್ಧಿಮಾಡಿದೆನಯ್ಯ ೪

ತಂದೆ ತಾಯ್ಗಳ ಸೇವೆ ಒಂದು ದಿನ ಮಾಡಲಿಲ್ಲ ।
ಮಂದ ಭಾಗ್ಯನ ಬವಣೆ ತಪ್ಪಲಿಲ್ಲ ॥
ಹಿಂದೆ ಮಾಡಿದ ದೋಷ ಒಂದುಳಿಯದರುಹಿದೆನು ।
ತಂದೆ ಪುರಂದರವಿಠಲ ಮುಂದೆನ್ನ ಕಾಯೊ ೫

## ೨೨೯

ಈ ಪರಿಯ ಅಧಿಕಾರ ಒಲ್ಲೆ ನಾನು ।
ಶ್ರೀಪತಿಯೆ ನೀನೊಲಿದು ಏನ ಕೊಟ್ಟುದೆ ಸಾಕು ಪ

ಚಿರಕಾಲ ನಿನ್ನ ಕಾಯ್ದು ತಿರುಗಿದುದಕೆ ನಾನು ।
ಕರುಣದಲಿ ರಚಿಸಿ ನೀ ಈ ದುರ್ಗದಿ ॥
ಇರ ಹೇಳಿದುದಕೆ ನಾ ಹೊಕ್ಕು ನೋಡಿದೆ ಒಳಗೆ ।
ಪುರುಳ ಲೇಶವು ಕಾಣೆ ಕರಕರೆಯು ಬಲುನೋಡು ೧

ದಾರಿಯಲಿ ಹೋಗಿ ಬರುವವರ ಉಪಟಳ ಘನ ।
ಚೋರರಟ್ಟುಳಿಗಂತೂ ನೆಲೆಯೆ ಇಲ್ಲ ॥
ವೈರಿವರ್ಗದ ಜನರು ಒಳಗೆ ಬಲು ತುಂಬಿಹರು ।
ಮೀರಿ ನಿನ್ನಲಿ ಮನವನೂರಿ ನಿಲಗೊಡರು ೨

ಸರಿಬಂದ ವ್ಯಾಪಾರ ಮಾಡಿ ತಾವೆನ್ನನ್ನು ।
ಬರಿಯ ಲೆಕ್ಕಕೆ ಮಾತ್ರ ಗುರಿಯ ಮಾಡಿ ॥
ಕರಕರೆಯ ಬಡಿಸಬೇಕೆಂದು ಯೋಚಿಸುತಿಹರು ।
ಕರೆದು ವಿಚಾರಿಸಿ ನ್ಯಾಯ ಮಾಡಿಸು ದೊರೆಯೇ ೩

ನಾಮಾಂಕಿತಕೆ ಮಾತ್ರ ಅಧಿಕಾರವೆನಗಿತ್ತೆ ।
ಸ್ವಾಮಿತ್ವವೋ ನೋಡು ಮನೆಮನೆಯಲಿ ॥
ಭೀಮ ವಿಕ್ರಮರವರು ದುರ್ಬಲಾಗ್ರಣಿ ನಾನು ।
ಗ್ರಾಮ ಒಪ್ಪಿಸೆ ನಮಿಪೆ ಸಂಬಂಧ ತೆರಮಾಡು ೪

ಕಾಲಕ್ಕೆ ಕರೆಯ ಬಂದವರಿಗೆ ಒಳಗಾಗಿ ।
ಪಾಳೆಯವನೊಪ್ಪಿಸಿಕೊಡುವೆವೆಂದು ॥
ಆಲೋಚಿಸಿಹರಯ್ಯ ಈಗಲೆನಗೆ ನಿನ್ನ ।
ಆಳುಗಳ ಬಲಮಾಡಿ ಎನ್ನ ರಕ್ಷಿಸು ದೊರೆಯೆ ೫

ಕ್ಷಣಕೆ ನೂರುಪಟಳ ಈ ಕೋಟೆಗೆಲೊ ರಾಯ ।
ಅನುವಾದ ದಿವಸವೊಂದಾದರಿಲ್ಲ ॥
ಮೊನೆಗಾರ ಜನವಿಲ್ಲ ಇದ್ದವರು ವಶವಿಲ್ಲ ।
ಕೊನೆಗೊಂಡು ಗ್ರಾಮ ಕಾಪಾಡುವ ತೆರನೆಂತೊ ೬

ಎನಗೆ ಈ ಬಹುನಾಯಕರ ಕೊಂಪೆಯೊಳು ವಾಸ–।
ವನು ಬಿಡಿಸಿ ನಿನ್ನ ನಿಜ ಪಟ್ಟಣದೊಳು ॥
ಮನೆ ಮಾಡಿಕೊಡಲು ನಾ ನಿನ್ನ ನೋಡಿಕೊಳುತ ।
ಅನುಗಾಲ ಬದುಕುವೆನೊ ಪುರಂದರವಿಠಲ ೭

## ೨೩೦

ಈ ಸಮಯಕಲ್ಲದಿನ್ನೆಲ್ಲಿ ಕಾಯೊ ।
ದೋಷರಹಿತ ವಾಸುದೇವ ನೀ ಕಾಯೊ ಕೃಷ್ಣ ಪ

ನಿನ್ನಂಘ್ರಿಯನು ಭಜಿಸಿದವರ ಬಾಳ್ವೆಯ ಕಾಯೊ ।
ಎನ್ನ ಸತಿ ಸುತರು ನಿನ್ನವರೆ ಕಾಯೊ ॥
ನೀನಲ್ಲದನ್ಯರನು ಕಾಣೆ ಕವಳಿಯ ಕಾಯೊ ।
ಮುನ್ನ ಸ್ಥಿರವಾಗಿ ನೀನೆಂಬೆ ಕಾಯೊ ೧

ಪರವೆಣ್ಣುಗಳಿಗೆ ಎನ್ನ ಮನಸು ಕಾತರಿ ಕಾಯೊ ।
ದುರಿತ ದುಷ್ಕರ್ಮ ಮುಂಚಿಲ್ಲ ಕಾಯೊ ॥
ಕರೆಕರೆಯ ಸಂಸಾರಕಷ್ಟು ಕಡಲಿಯ ಕಾಯೊ ।
ದುರಿತ ಭವ ಶರಧಿಗೆ ತಾರೆ ಕಾಯೊ ೨

ತ್ರಿವಿಧ ಪಾಪಂಗಳಿಗೆ ಪದವು ಉದ್ದಿನ ಕಾಯೊ।
ಭವಸಾಗರದೊಳೀಸೆಂಬೆ ಕಾಯೊ ॥
ದಿವಿಜೇಂದ್ರ ಕೃಷ್ಣ ಕೈಪಿಡಿದು ಒಲಿದು ಕಾಯೊ ।
ನವ ಮುಕ್ತಿ ಪುರಂದರ ವಿಠಲ ನೀ ಬಿಡದೆ ಕಾಯೊ ೩

## ೨೩೧

ಊರಿಗೆ ಬಂದರೆ ದಾಸಯ್ಯ – ನಮ್ಮ ।
ಕೇರಿಗೆ ಬಾ ಕಂಡೆ ದಾಸಯ್ಯ ಪ

ಕೇರಿಗೆ ಬಂದರೆ ದಾಸಯ್ಯ ಗೊಲ್ಲ ।
ಕೇರಿಗೆ ಬಾ ಕಂಡೆ ದಾಸಯ್ಯ ಅ.ಪ

ಕೊರಳೊಳು ವನಮಾಲೆ ಧರಿಸಿದನೆ ಕಿರು ।
ಬೆರಳಲಿ ಗಿರಿಯನೆತ್ತಿದನೆ ॥
ಇರುಳು ಹಗಲು ಇಲ್ಲದಲಿ ಹಿರಣ್ಯನ ।
ಮರಣವ ಮಾಡಿದ ದಾಸಯ್ಯ ೧

ಮುಂಗೈ ಮುರಾರಿ ದಾಸಯ್ಯ ಚೆಲುವ ।
ಪೊಂಗೊಳಲೂದುವ ದಾಸಯ್ಯ ॥
ಹಾಂಗೆ ಹೋಗದಿರು ದಾಸಯ್ಯ ಪೊ ।
ನ್ನುಂಗುರ ಕೊಡುವೆನು ದಾಸಯ್ಯ ೨

ಕಪ್ಪು ವರ್ಣದ ದಾಸಯ್ಯ ಕಂ – ।
ದರ್ಪನ ಪಿತನೆಂಬ ದಾಸಯ್ಯ ।
ಒಪ್ಪಿಕೊಂಡು ಎನ್ನ ಮನೆಗೆ ಬಂದರೆ ತೋಳ್ ।
ಕುಪ್ಪಸ ಕೊಡುವೆನು ದಾಸಯ್ಯ ೩

ಶಾಲು ಹೊದಿಸುವೆನು ದಾಸಯ್ಯ ತುತ್ತು ।
ಹಾಲು ಬೋನವುಣಿಸುವೆ ದಾಸಯ್ಯ ॥
ಕಾಲಿಗೆ ಬಿದ್ದೆನು ದಾಸಯ್ಯ ವನ ।
ಮಾಲೆಯ ಕೊಡುವೆನು ದಾಸಯ್ಯ ೪

ಸಿಟ್ಟು ಮಾಡಬೇಡ ದಾಸಯ್ಯ ತಾಳು ।
ರೊಟ್ಟಿ ಸುಡುವನಕ ದಾಸಯ್ಯ ತಂ ।
ಬಿಟ್ಟನಾದರು ಮೆಲ್ಲೊ ದಾಸಯ್ಯ ಪುರಂದರ ।
ವಿಠಲನೆಂಬ ದಾಸಯ್ಯ * ೫

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲೂ ಇದೆ.

## ೨೩೨

ಋಣವೆಂಬ ಸೂತಕವು ಬಹು ಬಾಧೆ ಬಡಿಸುತಿದೆ ।
ಗುಣನಿಧಿಯೆ ನೀ ಎನ್ನ ಕಡೆಹಾಯಿಸಯ್ಯ ಪ

ಒಡಲಿನಾಸೆಗೆ ಪರರ ಕಡೆಯಿಂದ ಧನವನ್ನು ।
ತಡೆಯದಲೆ ತಂದು ಸಂತೋಷ ಪಡುವೆ ॥
ಕೊಡುವ ವೇಳೆಗೆ ಅವರ ಬಿರುನುಡಿಗಳನು ಕೇಳ್ವ ।
ಕಡು ಪಾಪವನ್ನು ನೀ ಕಡೆಹಾಯಿಸಯ್ಯ ೧

ಕೊಟ್ಟ ದೊರೆಗಳು ಬಂದು ನಿಷ್ಠುರದ ಮಾತಾಡಿ ।
ಎಷ್ಟು ಬಯ್ವರೊ ತಮ್ಮ ಮನದಣಿಯಲು ॥
ದಿಟ್ಟತನವಿಲ್ಲದಲೆ ಕಳೆಯಗುಂದಿದೆನಯ್ಯ ।
ಸೃಷ್ಟಿಗೊಡೆಯನೆ ಎನ್ನ ಕಷ್ಟ ಪರಿಹರಿಸೊ ೨

ಆಳಿದೊಡೆಯನ ಮಾತ ಕೇಳಿ ನಡೆಯಲು ಬಹುದು ।
ಊಳಿಗವ ಮಾಡಿ ಮನದಣಿಯ ಬಹುದು ॥
ಕಾಳಗವ ಪೊಕ್ಕು ಕಡಿದಾಡಿ ಜಯಿಸಲು ಬಹುದು ।
ಪೇಳಲಳವಲ್ಲ ಋಣದವಗೊಂದು ಸೊಲ್ಲ ೩

ಹರಿವ ಹಾವನು ಹಿಡಿದು ತಲೆಗೆ ಸುತ್ತಲು ಬಹುದು ।
ಮುರಿವ ಮಾಳಿಗೆಯ ಕೈಯೊಳು ನಿಲಿಸ ಬಹುದು ॥
ಉರಿವ ಉರಿಯೊಳು ಹೊಕ್ಕು ಹೊರ ಮೊರಟು ಬರಬಹುದು ।
ಬೆರೆದು ಸೇರಲು ಬಹುದು ವೈರಿಗಳ ಮನೆಯ ೪

ಹೆತ್ತ ಸೂತಕ ಹತ್ತುದಿನಕೆ ಪರಿಹಾರವು ।
ಮೃತ್ಯು ಸೂತಕವು ಹನ್ನೆರಡು ದಿನವು ॥
ಮತ್ತೆ ಋಣಸೂತಕವು ಜನ್ಮಜನ್ಮಾಂತರದಿ ।
ಹತ್ತಿಕೊಂಡಿಹುದು ಎತ್ತಲು ಹೋಗಗೊಡದೆ ೫

ಅವರ ದ್ರವ್ಯವ ದಾನ–ಧರ್ಮವನು ಮಾಡಿದರೆ ।
ಅವರಿಗಲ್ಲದೆ ಪುಣ್ಯ ಇವರಿಗುಂಟೆ ॥

ಅವರ ದ್ರವ್ಯದಿ ತೀರ್ಥಯಾತ್ರೆಯನು ಮಾಡಿದರೆ ।
ಅವರ ಮನೆಬಾಡಿಗೆಯ ಎತ್ತಿನಂದದಲಿ ೬

ಬಂಧುಗಳ ಮುಂದೆನ್ನ ಬಹುಮಾನಗಳು ಹೋಗಿ ।
ಕಂದಿ ಕುಂದಿದೆನಯ್ಯ ಕರುಣಾನಿಧೆ ॥
ಇಂದಿರಾರಮಣ ಶ್ರೀ ಪುರಂದರವಿಠಲನೆ ।
ಇಂದೆನ್ನ ಋಣದಿಂದ ಕಡೆ ಹಾಯಿಸಯ್ಯ ೭

## ೨೩೩

ಎಂತು ನಿನ್ನ ಪೂಜೆ ಮಾಡಿ ಮೆಚ್ಚಿಸುವೆನೊ ಪ

ಚಿಂತಾಯತನೆ ನಿನ್ನ ನಾಮ ಎನಗೊಂದು ಕೋಟಿ ಅ.ಪ

ಪವಿತ್ರೋದಕದಿ ಪಾದ ತೊಳೆವೆನೆಂತೆಂದರೆ ।
ಪಾವನೆಯಾದ ಗಂಗೆ ಪಾದೋದ್ಭವೆ ॥
ನವಕುಸುಮವ ಸಮರ್ಪಿಸುವೆನೆಂದರೆ ಉದು
ಭವಿಸಿಹನು ಅಜ ನಿನ್ನ ಪೊಕ್ಕುಳ ಹೂವಿನಲಿ ೧

ದೀಪವನು ಬೆಳಗುವೆನೆ ನಿನ್ನ ಕಂಗಳು ಸಪ್ತ
ದ್ವೀಪಂಗಳೆಲ್ಲವನು ಬೆಳಗುತಿಹವೋ ॥
ಆಪೋಶನವನಾದರೀವೆನೆಂತೆಂಬೆನೆ
ಆಪೋಶನವಾಯ್ತು ಏಳು ಅಂಬುಧಿಯು ೨

ಕಾಣಿಕೆಯಿತ್ತಾದರೂ ಕೈ ಮುಗಿವೆನೆಂದರೆ
ರಾಣಿವಾಸವು ಸಿರಿದೇವಿ ನಿನಗೆ ॥
ಮಾಣದೆ ಮನದೊಳು ನಿನ್ನ ನಾಮಸ್ಮರಣೆ
ಧ್ಯಾನವನು ದಯೆ ಮಾಡೋ ಪುರಂದರವಿಠಲ ೩

## ೨೩೪

ಎಂದಪ್ಪಿಕೊಂಬೆ ರಂಗಯ್ಯ ನಿನ್ನ ।
ಎಂದಪ್ಪಿಕೊಂಬೆ ಪ

ಎಂದಪ್ಪಿಕೊಂಬೆ ನಾನೆಂದು ಮುದ್ದಾಡುವೆ ।
ಎಂದಿಗೆ ಸವಿಮಾತನಾಡಿ ನಾ ದಣಿವೆನೊ ಅ.ಪ

ಅರಳೆಲೆಮಾಗಾಯಿ ಕೊರಳ ಪದಕ ಸರ ।
ತರಳರನೊಡಗೂಡಿ ಬೆಣ್ಣೆಯ ಮೆಲುವನ ೧

ಅಂದುಗೆ ಪಾಯ್ವಟ್ಟು ಗೆಜ್ಜೆ ಘಿಲುಘಿಲು ಕೆನೆ ।
ಚೆಂದದಿ ಕುಣಿವ ಮುಕುಂದನ ಚರಣವ ೨

ಹೊನ್ನಿನ ಉಡುದಾರ ರನ್ನದ ಚೌಕುಳಿ ।
ಚಿನ್ನದುಂಗುರವಿಟ್ಟ ಜಾಹ್ನವಿ ಜನಕನ ೩

ಅಪ್ಪಣ್ಣ ಭಾಗವತನ ರೂಪವು ತಾನಾಗಿ ।
ತುಪ್ಪದ ಬಿಂದಿಗೆ ತಂದ ವಿಠಲನ ೪

ಪರಿಪರಿ ಭಕುತರ ಮರೆಯದೆ ಸಲಹುವ ।
ಪುರಂದರವಿಠಲನ ಸಿರಿಪಾದಪದುಮವ ೫

## ೨೩೫

ಎಂದಿಗೆ ನಾನಿನ್ನು ಧನ್ಯನಹೆನೊ
ಎಂದಿಗೆ ನಿನ್ನ ಚಿತ್ತಕೆ ಬಹೆನೊ ಅಚ್ಯುತನೆ ಪ

ಪುಲು ಮರವು ಗಿಡ ಬಳ್ಳಿ ಕುಲದಲಿಪ್ಪತ್ತು ಲಕ್ಷ
ಜಲ ಜೀವದೊಳಗೆ ಒಂಬತ್ತು ಲಕ್ಷ ॥
ಅಳಲಿ ಏಕಾದಶ ಲಕ್ಷ ಕ್ರಿಮಿ ಕೀಟದಲಿ
ತೊಳಲಿ ಬಳಲಿದೆನಂಡಜದೊಳು ದಶಲಕ್ಷ ೧

ಚರಣ ನಾಲ್ಕರಲಿ ಮೂವತ್ತು ಲಕ್ಷ ಜೀವಿಸಿ
ನರನಾಗಿ ಚರಿಸಿದೆನು ನಾಲ್ಕು ಲಕ್ಷ ॥
ಪರಿಪರಿಯ ಭವದಿಂದ ಬಲು ನೊಂದೆನೈ ನಿನ್ನ
ಸರಸಿಜಸಂಭವನ ಕಲ್ಪದಲ್ಲಿ ೨

ಎಂಬತ್ತುನಾಲಕುಲಕ್ಷ ಯೋನಿಗಳಲ್ಲಿ
ಅಂಬುಜನಾಭ ನಿನ್ನ ಲೀಲೆಗಾಗಿ ॥
ಕುಂಭಿನಿಯೊಳು ಬಂದು ನೊಂದೆನಯ್ಯಾ ಸ್ವಾಮಿ
ಕಂಬುಕಂಧರ ಸಿರಿ ಪುರಂದರ ವಿಠಲ ೩

## ೨೩೬

ಎಂದೆಂದಿಗೂ ನಿನ್ನ ಪಾದವೆ ಗತಿಯೋ ಗೋ
ವಿಂದ ಬಾರೈ ಎನ್ನ ಹೃದಯ ಮಂದಿರಕೆ ಪ

ಮೊದಲಿಲ್ಲಿ ಬರಬಾರದು ನಾ ಬಂದೆ
ತುದಿಮೊದಲಿಲ್ಲದ ಭವದಿಂದ ನೊಂದೆ ॥
ಇದರಿಂದ ಗೆದ್ದು ಹೋಗುವುದೆಂತು ಮುಂದೆ
ಪದುಮನಾಭನೆ ತಪ್ಪು ಕ್ಷಮೆಮಾಡು ತಂದೆ ೧

ಹೆಣ್ಣು ಹೊನ್ನು ಮಣ್ಣಿನಾಶೆಗೆ ಬಿದ್ದು
ಪುಣ್ಯ ಪಾಪಂಗಳ ನಾನರಿತಿದ್ದು ॥
ಅನ್ಯಾಯವಾಯಿತು ಇದಕೇನು ಮದ್ದು
ನಿನ್ನ ಧ್ಯಾನವ ಕೊಡು ಹೃದಯದೊಳಿದ್ದು ೨

ಹಿಂದೆ ನಾ ಮಾಡಿದ ಪಾಪವ ಕಳೆದು
ಮುಂದೆನ್ನ ಜನ್ಮ ಸಫಲ ಮಾಡಿ ಪೊರೆದು ॥
ತಂದೆ ಶ್ರೀ ಪುರಂದರ ವಿಠಲ ನೀನಿಂದು
ಬಂದು ಸಲಹೊ ನನ್ನ ಹೃದಯದಿ ನಿಂದು ೩

## ೨೩೭

ಎನ್ನ ಕಡೆಹಾಯಿಸುವುದು ನಿನ್ನ ಭಾರ ।
ನಿನ್ನ ಸ್ಮರಣೆ ಮಾಡುವುದು ಎನ್ನ ವ್ಯಾಪಾರ ಪ

ಎನ್ನ ಸತಿ ಸುತರಿಗೆ ನೀನೆ ಗತಿ ।
ನಿನ್ನವರು ಎಂಬುದೇ ಎನ್ನ ನೀತಿ ೧

ಎನ್ನ ನಿತ್ಯ ಸಾಕುವುದು ನಿನ್ನ ಧರ್ಮ ।
ನಿನ್ನ ಮರೆತು ಬದುಕುವುದು ಎನ್ನ ಕರ್ಮ ೨

ಎನ್ನ ತಪ್ಪ ಎಣಿಸುವುದು ನಿನಗೆ ಸಲ್ಲ ।
ನಿನ್ನ ಮರೆತು ತಿರುಗುವುದು ಎನ್ನದಲ್ಲ ೩

ಎನಗೆ ಪಡಿಯಿಕ್ಕುವುದು ನಿನ್ನ ಮಾನ ।
ನಿನ್ನ ಮರೆತು ತಿರುಗುವುದು ಎನ್ನ ಅಪಮಾನ ೪

ನೀನಲ್ಲದೆ ಇನ್ನಾರಿಗೆ ಮೊರೆ ಇಡುವೆ ।
ಎನ್ನ ಪುರಂದರವಿಠಲ ನಿನಗೆ ಪೇಳುವೆ ೫

## ೨೩೮

ಎನ್ನ ಮನದ ಡೊಂಕ ತಿದ್ದಿ–
ಚರಣದಲ್ಲಿ ಸೇರಿಸೋ ।
ನಿನ್ನ ಸೇವಕನಾದ ಮೇಲೆ
ಇನ್ನು ಸಂಶಯವೇಕೆ ಕೃಷ್ಣ ಪ

ಉದಯವಾದರೆ ಊಟದ ಚಿಂತೆ ಅದರ ಮೇಲೆ ಭೋಗದ ಚಿಂತೆ ।
ಹದಿನಾಲ್ಕು ಲೋಕಂಗಳನಾಳಬೇಕೆಂಬ ಚಿಂತೆ ॥
ಇದು ಪುಣ್ಯ ಪಾಪವೆಂದು ಹೃದಯದಲಿ ಭಯವಿಲ್ಲದಲೆ ।
ಮದ ಮೋಹಿತನಾದೆ ನಿನ್ನ ಪದವ ನಂಬದೆ–ದಯಾಳೊ ೧

ನೆರೆಮನೆಗಳ ಭಾಗ್ಯವ ನೋಡಿ ತರಹರಿಸುತ ಅಸೊಯೆಯಿಂದ ।
ಹರಿಯ ಸ್ಮರಣೆಗೆ ವಿಮುಖನಾದೆ ನರರಸ್ತುತಿಯ ನಾ ಮಾಡಿದೆ ॥
ಪರರ ಸತಿಗೆ ಪರರನ್ನಕೆ ತಿರುಗಿ ತಿರುಗಿ ಚಪಲನು ಆದೆ ।
ಗುರುಹಿರಿಯರ ದೂಷಿಸುತಲಿ ಮರುಳನಾದೆ ದೀನಶರಣ್ಯ ೨

ಅಗಣಿತ ಸುಖ ಬಂದರೆ ನಾನು –
ಅಗಣಿತ ದುಃಖಕೆ ಹರಿಯೆನ್ನುವೆನು ।
ಜಗದೊಳಾವ ಲಾಭವು ಬಂದರು ಧನಿಯು ನಾನೆ ಎಂಬೆ ॥
ಮಿಗೆ ಹಾನಿಗೆ ಹರಿಯನು ದೂಷಿಸಿ
ನೆಗೆದು ಪತಂಗವು ಕಿಚ್ಚಲಿ ಬೀಳುವ ।
ಬಗೆ ನಾನಾದೆನು ಪುರಂದರ ವಿಠಲನ ಖಗರಾಜ
ಸುವಾಹನ ಶ್ರೀ ಕೃಷ್ಣ ೩

## ೨೩೯

ಎನ್ನ ರಕ್ಷಿಸೊ ನೀನು – ದೇವರ ದೇವ ಪ

ಎನ್ನ ರಕ್ಷಿಸೊ ನೀನು ಯಾದವ ಕುಲಮಣಿ
ಮುನ್ನ ದ್ರೌಪದಿಯಭಿಮಾನ ಕಾಯ್ದ ಕೃಷ್ಣ ಅ.ಪ.

ಬಾಲನ ಮೊರೆಯನು ಕೇಳಿ ಕೃಪೆಯಿಂದ
ಪಾಲಿಸಿದೆಯೊ ನರಸಿಂಹ ರೂಪದಿಂದ ೧

ಪಾಷಾಣ ಚರಣದಿ ಯೋಷಿದ್ರೂಪವ ಗೈದೆ
ದೋಷ ಸಂಹಾರ ನಿರ್ದೋಷಗುಣಪೂರ್ಣನೆ ೨

ಇನಕುಲಾಂಬುದಿಚಂದ್ರ ಘನಶುಭಗುಣಸಾಂದ್ರ
ಸನಕಾದಿ ಮುನಿವಂದ್ಯ ಪುರಂದರ ವಿಠಲ ೩

## ೨೪೦

ಎಳ್ಳು ಕಾಳಿನಷ್ಟು ಭಕುತಿ ಎನ್ನೊಳಗಿಲ್ಲವಯ್ಯ
ಬೆಳ್ಳಕ್ಕಿಯಂತೆ ನಿನ್ನ ಧ್ಯಾನವ ಮಾಡುವೆನಯ್ಯಾ ಪ

ಗುಂಡು ಮುಳುಗಹಕ್ಕಿಯಂತೆ ನೀರ ಕಂಡ ಕಡೆಗೆ ಮುಳುಗಿ
ಮಂಡೆ ಶೂಲೆಯಲ್ಲದೆ ಗತಿಯು ಇಲ್ಲ
ಮಂಡೆ ಮುಸುಕನಿಕ್ಕಿ ಮಂತ್ರ ಜಪಿಸುವೆನಯ್ಯ ೧

ಗಾಣದೆತ್ತಿನಂತೆ ಕಣ್ಣಕಟ್ಟಿ ಪ್ರದಕ್ಷಿಣೆ ಮಾಡಿ
ಕಾಣದೆ ನಾ ತಿರುಗಿದೆ ಕಂಡುದಿಲ್ಲ
ಮಾಣಿಕ್ಯದ ರಾಶಿ ಯೆಡಿಗೆ ಕಂಗಳಯ್ಯನು ಪೋಗಿ
ಆಣಿಕಾರಿಕೆ ಮಾಡಿದಂಥ ಈ ಕುಯುಕ್ತಿಯು ೨

ಇಕ್ಕಳವ ಕೈಯ ಪಿಡಿದುಕೊಂಡು ಕಾದ ಕಬ್ಬಿಣದಂತೆ
ಸಿಕ್ಕಿಸಿಕೊಂಡಲ್ಲದೆ ಗತಿಯು ಇಲ್ಲ
ಪೊಕ್ಕಳ ಪೂವಿನ ಶ್ರೀ ಪುರಂದರವಿಠಲನೆ
ಮಕ್ಕಳಾಟಿಕೆಯ ಬಿಡೊ ರಕ್ಷಿಸೊ ಎನ್ನೊಡೆಯ * ೩

## ೨೪೧

ಏಕೆ ಕಡೆಗಣ್ಣಿಂದ ನೋಡುವೆ – ಕೃಷ್ಣ ।
ನೀ ಕರುಣಾಕರನಲ್ಲವೆ ? ಪ

ಭಕ್ತವತ್ಸಲ ನೀನಲ್ಲವೆ –ಕೃಷ್ಣ ।
ಚಿತ್ಸುಖದಾತ ನೀನಲ್ಲವೆ ? ॥
ಅತ್ಯಂತ ಅಪರಾಧಿ ನಾನಾದಡೇನಯ್ಯ।
ಇತ್ತಿತ್ತ ಬಾ ಎನ್ನಬಾರದೆ ರಂಗ ೧

ಇಂದಿರೆಯರಸ ನೀನಲ್ಲವೆ – ಬಹು
ಸೌಂದರ್ಯನಿಧಿ ನೀನಲ್ಲವೆ ? ॥
ಮಂದಮತಿ ನಾನಾದಡೇನು ಕೃಪಾ–
ಸಿಂಧು ನೀ ರಕ್ಷಿಸಬಾರದೆ ರಂಗ ೨

ದೋಷಿಯು ನಾನಾದಡೇನಯ್ಯ – ಸರ್ವ –
ದೋಷರಹಿತ ನೀನಲ್ಲವೆ ? ॥

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲೂ ಇದೆ.

## ೨೪೮

ಏನ ಮಾಡಲಿ ಶ್ರೀ ಹರಿ ಇಂಥ ।
ಮಾನವಜನ್ಮ ಮೆಚ್ಚಿಸಬಹುದೆ? ಪ

ಮಾತನಾಡದೆ ಮೌನದೊಳಿದ್ದರೆ–ಮೂಕ–।
ನೀತನೆಂದು ಧಿಕ್ಕರಿಸುವರು ॥
ಚಾತುರ್ಯದಿಂದಲಿ ಮಾತುಗಳಾಡಲು ।
ಈತನು ಬಲು ಬಾಯ್ಬಡಿಕನೆಂಬುವರಯ್ಯ ೧

ಮಡಿ ನೇಮ ಜಪ–ತಪಂಗಳ ಮಾಡುತಿದ್ದರೆ ।
ಬಡಿವಾರದವನೆಂದಾಡುವರು ॥
ಮಡಿ ನೇಮ ಜಪ–ತಪಂಗಳ ಮಾಡದಿದ್ದರೆ ।
ನಡತೆಹೀನನೆಂದು ಬಲು ನಿಂದಿಸುವರಯ್ಯ ೨

ಗಟ್ಟಿಯಾಗಿ ಒಪ್ಪತ್ತಿನೂಟದೊಳಿದ್ದರೆ ।
ನಿಷ್ಠೆಯೇನು ಸುಟ್ಟಿತೆಂಬರು ।
ಗಟ್ಟಿಯಾಗಿ ಎರಡು ಮೂರುಬಾರಿಯುಂಡರೆ ।
ಹೊಟ್ಟೆಬಾಕನೆಂದು ತೆಗಳಾಡುವರಯ್ಯ ೩

ಒಲಪಿನೊಳ್ಳೆನ್ನಿಗತನವನು ಮಾಡಲು ।
ಬಲು ಹೆಮ್ಮೆಗಾರನೆಂದಾಡುವರು ॥
ಸುಲಭತನದಿ ತಾ ನಿಗರ್ವಿಯಾಗಿದ್ದರೆ ।
ಕಲಿಯುಗದಲಿ ಮಂದಮತಿಯೆಂಬುವರಯ್ಯ ೪

ನರಜನ್ಮದೊಳಗಿನ್ನು ಮುಂದೆ ಪುಟ್ಟಿಸಬೇಡ ।
ಮರೆ ಹೊಕ್ಕೆ ಮತ್ಸ್ಯಾವತಾರ ನಿನ್ನ ॥
ಧರೆಯೊಳಗಿಹ ಪರಿಯಂತರ ಸಲಹೆನ್ನ ।
ಕರುಣವಾರಿಧಿ ಶ್ರೀ ಪುರಂದರ ವಿಠಲ ೫

## ೨೪೯

ಏನಮಾಡಿದರೆನ್ನ ಭವಹಿಂಗದು ।
ದಾನವಾಂತಕ ನಿನ್ನ ದಯವಾಗದನಕ ಪ

ಅರುಣೋದಯಲೆದ್ದು ಅತಿಸ್ನಾನಗಳ ಮಾಡಿ ।
ಬೆರಳನೆಣಿಸುತ ಸ್ಮರಿಸಿ ನಿಜವರಿಯದೆ ॥
ಶರಣು ಸಾಷ್ಟಾಂಗವನು ಹಾಕಿದೆನು ಶತಸಹಸ್ರ ।
ಹರಿ ನಿನ್ನ ಕರುಣಾ ಕಟಾಕ್ಷವಿರದನಕ ೧

ಶ್ರುತಿಶಾಸ್ತ್ರ ಪುರಾಣಗಳನೋದಿ ಬೆಂಡಾದೆ ।
ಅತಿ ಶೀಲಗಳನೆಲ್ಲ ಮಾಡಿ ದಣಿದೆ ॥
ಗತಿಯ ಪಡೆಯುವೆನೆಂದು ಗಯೆ ಕಾಶಿಯ ಮಾಡಿದೆನು ।
ರತಿಪತಿಯ ಪಿತ ನಿನ್ನ ದಯವಾಗದನಕ ೨

ದಾನವನು ಮಾಡಿದೆನು ಮೌನವನು ತಾಳಿದೆನು ।
ಜ್ಞಾನ ಪುರುಷಾರ್ಥಕ್ಕೆ ಮನವೀಯದೆ ॥
ಶ್ರೀನಾಥ ದಯಪೂರ್ಣ ಪುರಂದರವಿಠಲನ ।
ಧ್ಯಾನಿಸುವರೊಡನಾಡಿ ನೆಲೆಗೊಳ್ಳದನಕ ೩

## ೨೫೦

ಏನನಿತ್ತು ಮೆಚ್ಚಿಸುವೆನು ಏನೋ ವಿಠಲ ಪ

ಮಾನಿನಿಯರಸ ನಿನ್ನ ನಾಮವನ್ನೆ ನೆನೆವೆನಯ್ಯ ಅ.ಪ

ಓದಿ ನಿನ್ನ ಮೆಚ್ಚಿಸುವೆನೆ ವೇದವನ್ನು ಅಜನಿಗಿತ್ತೆ
ವಾದಿಸಿ ನಿನ್ನ ಮೆಚ್ಚಿಸುವೆನೆ ಆದಿಶೇಷಶಯನನೆ ೧

ಆಡಿ ನಿನ್ನ ಮೆಚ್ಚಿಸುವೆನೆ ಮೃಡನಯ್ಯನಯ್ಯನೆ
ಪಾಡಿ ನಿನ್ನ ಮೆಚ್ಚಿಸುವೆನೆ ಪವನಜನೊಡೆಯನೆ ೨

ಚಿನ್ನವಿತ್ತು ಮೆಚ್ಚಿಸುವೆನೆ ಸಿರಿದೇವಿಯ ರಮಣನೆ
ಪೂರ್ಣಾನಂದ ಜ್ಞಾನಿ ನೀನೆ ಪುರಂದರ ವಿಠಲಯ್ಯ ೩

## ೨೫೧

ಏನು ಕೌತಕ ಕೃಷ್ಣ ತಾನೆ ಕನಸಿನೊಳು ।
ಮಾನವರ ತೆರನಂತೆ ಮರುಳಾಡಿಸಿದನೆನ್ನ ಪ

ಹಿಂದೆ ಮಾಡಿದ ಪದವ ಒಂದು ಹೇಳೆಂದೆನುತ ।
ಮುಂದೆ ಅದರಂದವನು ಎಲ್ಲ ತಾ ಪೇಳ್ದ ॥
ಒಂದು ದೋಸೆಯ ತನಗೆ ತಂದುಕೊಡು ಎಂದೆನಲು ।
ತಿಂದ ಮೀಸಲಕೊಡೆನು ಎಂದು ಹೇಳಿದೆನು ೧

ಮೋಸಹೋದೆನು ನಾನು ದೋಸೆಯನು ಹರಿಗೆ–ಆ–
ಪೋಶನವನಿಕ್ಕದೇ ಪೋಷಿಸಿದೆನು ॥
ಮೀಸಲಾದರು ಅಹುದು ದೋಷವಿಲ್ಲೆಂದೆನುತ ।
ಆಸುರದ ಮಾತುಗಳ ವಾಸಿತೋರಿಸಿದನು ೨

ಎಳೆಯ ಪ್ರಾಯದೊಳಿರುವ ಚೆಲುವೆಯೊರ್ವಳು ಬಂದು ।
ಹೊಳೆಯೊಳಗೆ ಈಸಾಡಿ ನಲಿವುದನು ನೋಡಿ ॥
ನಳಿನಮುಖಿಯನು ಮೇಲೆ ಕರೆಸಲಾ ಮೈಲಿಗೆಯ ।
ತೊಳಕೊಂಡು ಒಳಯಿಂಕೆ ಬಂದುದನು ಕಂಡೆ ೩

ಈ ರೀತಿ ಸಿರಿಸಹಿತ ವಾರಿಜಾಕ್ಷನು ಕೃಷ್ಣ ।
ತೋರಿದನು ಸ್ವಪ್ನ ಕಣ್ಣಾರೆ ನೋಡಿದೆನು ॥
ಹಾರಿಹೋಯಿತು ಕಷ್ಟ ಸೂರೆಗೊಂಡೆನು ಸಿರಿಯ ।
ಏರಿ ಬಂದುದು ಶುಭದ ವಾರಿಧಿಯು ಮುಂದೆ ೪

ಈ ಮಹಾಮೂರ್ತಿಯನು ಜಾವಪರ್ಯಂತರದಿ ।
ಕಾಮಿಸಿಯೆ ನೋಡಿದೆನು ಸೌಮ್ಯನಸ್ಯದಲಿ ॥
ಆ ಮಹಾ ಹರಿಯು ಪರಧಾಮವನು ಕೈಕೊಂಡು ।
ಭೂಮಿಪತಿಯಾಗಿರ್ದ ಪುರಂದರವಿಠಲ ೫

## ೨೫೨

ಏನು ಬರೆದೆಯೊ ಬ್ರಹ್ಮ ಎಂತು ನಿರ್ದಯನು–ಅಭಿ ।
ಮಾನವನು ತೊರೆದು ಪರರನು ಪೀಡಿಸುವುದ ಪ

ಬಲ್ಲಿದರ ಮನೆಯ ಬಾಗಿಲ ಕಾಯ್ದು ಬೇಸತ್ತು ।
ಸೊಲ್ಲು ಸೊಲ್ಲಿಗೆ ಅವರ ಕೊಂಡಾಡುತ ॥
ಇಲ್ಲ ಈ ವೇಳೆಯಲಿ ನಾಳೆ ಬಾ–ಎನಲಾಗಿ ।
ಅಲ್ಲವನೆ ತಿಂದ ಇಲಿಯಂತೆ ಬಳಲುವುದ ೧

ಗೇಣೊಡಲ ಹೊರೆವುದಕೆ ಹೋಗಿ ನರರೊಳು ಪಂಚ–।
ಬಾಣ ಸಮರೂಪ ನೀನೆಂದು ಪೊಗಳೆ ॥
ಮಾಣು ಎನ್ನಾಣೆ ನೀ ನಾಳೆ ಬಾ ಎಂದೆನಲು ।
ಗಾಣ ತಿರುಗುವ ಎತ್ತಿನಂತೆ ಬಳಲುವುದ ೨

ಹಿಂದೆ ಬರೆದಾ ಬರೆಹ ಏನಾದರಾಗಲಿ ।
ಮುಂದೆನ್ನ ವಂಶದಲಿ ಪುಟ್ಟುವರಿಗೆ ॥
ಸಂದೇಹ ಬೇಡ ಶ್ರೀ ಪುರಂದರ ವಿಠಲನೇ ।
ಕಂದರ್ಪನಯ್ಯ ಉಡುಪಿಯ ಕೃಷ್ಣರಾಯ ೩

## ೨೫೩

ಏನೆಂದರೇನು ನೀನೆನ್ನ ಕಾಯೊ–।
ನೀನೆ ನನಗೆಂದೆಂದು ತಂದೆ–ತಾಯೊ ಪ

ಆಪತ್ತು ಕಾಲಕ್ಕೆ ಅನಂತ ನೀ ಕಾಯೊ ।
ತಾಪಜ್ವರಕೆ ತ್ರಿವಿಕ್ರಮನೆ ಕಾಯೋ ॥
ಭೂಪತಿಯು ಮುನಿದರೆ ಶ್ರೀಪತಿಯೆ ನೀ ಕಾಯೊ ।
ವ್ಯಾಪಾರ ಧರ್ಮವನು ಯದುಪತಿಯೆ ನೀ ಕಾಯೊ ೧

ಸರುಪ ಸುತ್ತಿದರೆ ಸರ್ವೋತ್ತಮನೆ ನೀ ಕಾಯೊ ।
ಪರಿಪರಿಯ ದೋಷಗಳ ಪದ್ಮನಾಭ ಕಾಯೊ ॥
ಹರಕು ಸಂಸಾರವನು ಹರಿ ಬಂದು ನೀ ಕಾಯೊ ।
ದೊರಕದೀ ವೇಳೆಯಲಿ ದೊರೆ ನೀನೆ ಕಾಯೊ ೨

ನರರು ಮುನಿದಿರಲು ನಾರಾಯಣನೆ ನೀ ಕಾಯೊ ।
ಪುರ ಬೆನ್ನುಗೊಳಲು ಪುರುಷೋತ್ತಮನೆ ನೀ ಕಾಯೊ ।
ಅರಿಯು ಅಡ್ಡಾದರೆ ಅಚ್ಯುತನೆ ನೀ ಕಾಯೊ ॥
ಕರಕರೆಯ ಸಂಸಾರ ಕೃಷ್ಣ ನೀ ಕಾಯೊ ೩

ಮದಮತ್ಸರವನು ಮಧುಸೂದನನೆ ನೀ ಕಾಯೊ ।
ಮದಬಂದ ವೇಳೆಯಲಿ ಮಾಧವನೆ ಕಾಯೊ ॥
ಹೃದಯದಾ ಕಪಟವ ಹೃಷಿಕೇಶ ನೀ ಕಾಯೊ ।
ಒದಗಿದ ಕಲ್ಮಷವ ವಾಸದೇವ ಕಾಯೊ ೪

ಕಾರ್ಪಣ್ಯ ದೋಷವ ಸರ್ಪಶಯನನೆ ಕಾಯೊ ।
ಒಪ್ಪುವ ಪ್ರಕಾಶವ ಕೇಶವನೆ ಕಾಯೊ ।
ಅಪ್ಪ ತಿರುಮಲರಾಯ ಪುರಂದರವಿಠಲನೆ ।
ಒಪ್ಪಿ ಅನವರತ ನಿಶ್ಚಿಂತೆಯನು ಕಾಯೊ * ೫

## ೨೫೪

ಓಡಿ ಬಾರಯ್ಯ ವೈಕುಂಠಪತಿ ನಿನ್ನ
ನೋಡುವೆ ಮನದಣಿಯೆ ಪ

ನೋಡಿ ಮುದ್ದಾಡಿ ಮಾತಾಡಿ ಸಂತೋಷದಿ
ಪಾಡಿ ಪೊಗಳುವೆನು ಪರಮ ಪುರುಷ ಹರಿ ಅ.ಪ

ಕೆಂದಾವರೆಯಂತೆ ಪಾದಂಗಳೆರಡು
ಅಂದುಗೆ ಕಿರುಗೆಜ್ಜೆ ಘಲುಘಲುರೆನುತ ॥

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ಚೆಂದದಿ ಪೀತಾಂಬರ ವಲೆದಾಡುತ
ಕುಂದಣಮುಡುದಾರ ಝಣ ಝಣ ಝಣಕುತ ೧

ಕೋಟಿ ಸೂರ್ಯ ಪ್ರಕಾಶಗಳಿಂದಲಿ ಲ–
ಲಾಟದಲ್ಲಿ ಇಟ್ಟ ಕಸ್ತುರಿ ತಿಲಕ ॥
ಕೂಟದ ಗೋಪಾಂಗನೆಯರ ಕೂಡೆ
ಆಟ ಸಾಕು ಬಾರೋ ಅರವಿಂದನಯನ ೨

ಕಿರುತುರುಬಿನ ಮೇಲೆ ಒಲೆವುತಿರುತಿರೆ
ಮರುಗ ಮಲ್ಲಿಗೆ ಜಾಜಿ ಶ್ರೀತುಳಸೀ ॥
ಕರದಲಿ ಪಿಡಿದಾ ಪೊಂಗೊಳಲೂದುತ
ತಿರಿತಿಂದು ಬಾಹೋ ಸಡಗರ ಸಾಕೋ ೩

ಎಣ್ಣೂರಿಗತಿರಸ ಸದಮಲ ದೋಸೆ ಬೆಣ್ಣೆ
ಅಣ್ಣಯ್ಯ ನಿನಗೆ ಕೊಡುವೆನೋ ಬಾರೋ ॥
ಕಣ್ಣಮುಚ್ಚಿ ಗೋಪಾಂಗನೆಯರ ಕೂಡಿ ।
ಬೆಣ್ಣೆಯ ಮೆಲುವುದು ಉಚಿತವೆ ಸಾಕೋ ೪

ಮಂಗಳಾತ್ಮಕ ಮೋಹನಾಕಾರನೆ
ಸಂಗೀತ ಲೋಲ ಸದ್ಗುಣ ಶೀಲ ॥
ಮಂಗಳೆ ಲಕುಮಿಯ ಸಹಿತವಾಗಿ ಬಂದು
ಕಂಗಳ ಮುಂದಾಡೊ ಪುರಂದರ ವಿಠಲ ೫

## ೨೫೫

ಕಂಡು ಕಂಡೆಂತು ಕೈ ಬಿಡುವೆ ಹರಿಯೆ ।
ಪುಂಡರೀಕಾಕ್ಷ ನಿನ್ನ ನಂಬಿದ ಮೇಲೆ ಪ

ಕ್ಷಣವೊಂದು ಯುಗವಾಗಿ ತೃಣಕಿಂತ ಕಡೆಯಾಗಿ ।
ಬಣಗುದಾರಿದ್ರ್ಯದಲಿ ಬಲು ನೊಂದೆನಯ್ಯ ॥
ಫಣಿಶಾಯಿ ಪ್ರಹ್ಲಾದವರದನೇ ನೀನೆನಗೆ ।
ಹೊಣೆಯಾದ ಮೇಲಿನ್ನು ಮರುಳು ಗೊಳಿಸುವರೆ? ೧

ಒಂದು ದಿನ ಅತಿಥಿಗಳನುಪಚರಿಸಿದವನಲ್ಲ ।
ಬೆಂದೊಡಲ ಹೊರೆದು ಬೇಸತ್ತೆನಯ್ಯ ॥
ಕುಂದು-ಕೊರತೆಯು ಏಕೆ ? ನಿನ್ನ ನಂಬಿದೆ ದಯಾ-।
ಸಿಂಧು ಗೋವಿಂದನೇ ತಂದೆಯಾದ ಮೇಲೆ ೨

ಬಂಧು ಬಳಗ ಮುನ್ನಿಲ್ಲ ಬದುಕಿನಲ್ಲಿ ಸುಖವಿಲ್ಲ ।
ನಿಂದ ನೆಲ ಮುನಿಯುತಿದೆ ನೀರಜಾಕ್ಷ ॥
ತಂದೆ-ತಾಯಿಯು ನೀನೆ ಬಂಧು ಬಳಗವು ನೀನೆ ।
ಕುಂದದೇ ರಕ್ಷಿಸೈ ನಂದನಂದನನೆ ೩

ಆಶೆಯನು ಬಿಡಲಿಲ್ಲ ಅತಿ ಹರುಷವೆನಗಿಲ್ಲ ।
ದೇಶದೇಶವ ತಿರುಗಿ ದೆಸೆಗೆಟ್ಟೆನಯ್ಯ ॥
ವಾಸವಾರ್ಚಿತನಾದ ವೈಕುಂಠನಿಲಯ ಲ-।
ಕ್ಷ್ಮೀಶ ನೀಯೆನ್ನ ಕಣ್ಣಾರೆ ಕಂಡ ಮೇಲೆ ೪

ಭಕುತವತ್ಸಲನೆಂಬ ಬಿರುದು ಹೊತ್ತಿದ ಮೇಲೆ ।
ಭಕುತರಾಧೀನನಾಗಿರ ಬೇಡವೆ ॥
ಮುಕುತಿದಾಯಕನೆ ಬೇಲೂರು ಪುರಾಧೀಶ್ವರ ।
ಸಕಲ ದೇವರದೇವ ಪುರಂದರ ವಿಠಲ ೫

## ೨೫೬

ಕಂಡು ಕಂಡು ನೀ ಎನ್ನ ಕೈ ಬಿಡುವರೆ ಕೃಷ್ಣ
ಪುಂಡರೀಕಾಕ್ಷ ಪುರುಷೋತ್ತಮ ಹರೇ ಪ

ಬಂಧುಗಳು ಎನಗಿಲ್ಲ ಬದುಕಿನಲಿ ಸುಖವಿಲ್ಲ
ನಿಂದೆಯಲಿ ನೊಂದೆನಯ್ಯ ನೀರಜಾಕ್ಷ ॥
ತಂದೆ ತಾಯಿಯು ನೀನೇ ಬಂಧು ಬಳಗವು ನೀನೇ
ಎಂದೆಂದಿಗೂ ನಿನ್ನ ನಂಬಿದೆನೊ ಕೃಷ್ಣಾ ೧

ಕ್ಷಣವೊಂದು ಯುಗವಾಗಿ ತೃಣವು ಪರ್ವತವಾಗಿ
ಎಣಿಸಲಳವಲ್ಲ ಈ ಭವದ ವ್ಯಥೆಯ ॥

ಸನಕಾದಿ ಮುನಿವಂದ್ಯ ವನಜಸಂಭವನಯ್ಯ
ಫಣಿಶಾಯಿ ಪ್ರಹ್ಲಾದಗೊಲಿದ ನರಹರಿಯೆ ೨

ಭಕ್ತವತ್ಸಲನೆಂಬ ಬಿರುದು ಬೇಕಾದರೆ
ಭಕ್ತರ ಅಧೀನನಾಗಿ ಇರಬೇಡವೆ ॥
ಮುಕ್ತಿದಾಯಕ ದೇವ ಹೊನ್ನೂರ ಪುರವಾಸ
ಶಕ್ತ ಪುರಂದರ ವಿಠಲ ಶ್ರೀ ಕೃಷ್ಣಾ ೩

## ೨೫೭

ಕಂಡೆ ಕಂಡೆ ಕಂಡೆನಯ್ಯಾ ಕಂಗಳ ದಣಿಯುವ ತನಕ
ಮಂಗಳ ಮೂರುತಿ ಮನ್ನಾರು ಕೃಷ್ಣನ ಪ

ಉಟ್ಟ ಪೀತಾಂಬರ ಕಂಡೆ ತೊಟ್ಟ ವಜ್ರದಂಗಿ ಕಂಡೆ
ದಕ್ಷಿಣದ ದ್ವಾರಕಿ ಮನ್ನಾರು ಕೃಷ್ಣನ ೧

ಕಡೆವ ಕಡೆಗೋಲ ಕಂಡೆ ನಡುವಿನೊಡ್ಯಾಣ ಕಂಡೆ
ಕಡು ಮುದ್ದು ಮನ್ನಾರು ಕೃಷ್ಣನ ಕಂಡೆ ೨

ದೇವಕಿ ದೇವಿಯರ ಕಂಡೆ ಗೋಪಿಯರ ಮುದ್ದಾಟ ಕಂಡೆ
ಮಾವ ಕಂಸನ ಮರ್ದನ ಶ್ರೀ ಕೃಷ್ಣನ ೩

ಆಕಳ ಕಾವುದ ಕಂಡೆ ಗೋಪಾಲಕೃಷ್ಣನ ಕಂಡೆ
ವೈಕುಂಠವಾಸನ ಮನ್ನಾರು ಕೃಷ್ಣನ ೪

ಶೇಷನ ಹಾಸಿಕೆಯ ಕಂಡೆ ಸಾಸಿರ ನಾಮನ ಕಂಡೆ
ಶ್ರೀಶ ಪುರಂದರ ವಿಠಲ ಕೃಷ್ಣರಾಯನ ೫

## ೨೫೮

ಕಂಡೆ ತಿರುಪತಿ ವೆಂಕಟೇಶನ ಕಾರಣಾತ್ಮಕ ಸಾರ್ವಭೌಮನ
ಕಾಮಿತಾರ್ಥವನೀವ ದೇವನ ಕರುಣ
ನಿಧಿಯೆಂದೆನಿಸಿ ಮೆರೆವನ ಪ

ಕೋಟಿ ಸೂರ್ಯ ಪ್ರಕಾಶವೆನಿಪ ಕಿರೀಟವನು ಮಸ್ತಕದಿ ಕಂಡೆನು
ನೋಟಕ್ಕಚ್ಚರಿಯೆನಿಪ ನಗೆಮೊಗ
ನೊಸಲೊಳಗೆ ತಿರುಮಣಿಯ ಕಂಡೆನು
ಸಾಟಿಯಿಲ್ಲದ ಶಂಖ-ಚಕ್ರವ ಚತುರ ಹಸ್ತದಲೀಗ ಕಂಡೆನು
ಬೂಟಕದ ಮಾತಲ್ಲ ಕೇಳಿ-ಭೂರಿದೈವದ ಗಂಡನಂಘ್ರಿಯ ೧

ತಪ್ಪುಗಾಣಿಕೆ ಕಪ್ಪಗಳನು ಸಪ್ತಲೋಕಗಳಿಂದ ತರಿಸುವ
ಉಪ್ಪು ವೋಗರವನ್ನು ಮಾರಿಸಿ
ಉಚಿತದಿಂದಲಿ ಹಣವ ಗಳಿಸುವ ॥
ಇಪ್ಪತ್ತು ದುಡ್ಡಿಗೆ ಸೇರು ತೀರ್ಥವ ಒಪ್ಪದಿಂದ
ಕ್ರಯ ಮಾಡಿ ಕೊಡಿಸುವ
ಸರ್ಪಶಯನನ ಸಾರ್ವಭೌಮನ ಅಪ್ಪ
ವೆಂಕಟರಮಣನಂಘ್ರಿಯ ೨

ಉರದಿ ಶ್ರೀದೇವಿ ಇರಲು ಕಂಡೆನು
ಉನ್ನತದ ಕೌಸ್ತುಭವ ಕಂಡೆನು
ಗರುಡ ಕಿನ್ನರ ನಾರದಾದಿಗಳಿರಲು ಎಡಬಲದಲ್ಲಿ ಕಂಡೆನು ॥
ತರತರದಿ ಭಕ್ತರಿಗೆ ವರಗಳ ಕರೆದು
ಕೊಡುವುದ ನಾನು ಕಂಡೆನು
ಶರಧಿಶಯನನ ಶೇಷಗಿರಿವರ ಸಿರಿ ಪುರಂದರ ವಿಠಲನಂಘ್ರಿಯ ೩

## ೨೫೯

ಕಂಡೆನಾ ಕನಸಿನಲಿ ಗೋವಿಂದನ ಪ

ಕಂಡೆನಾ ಕನಸಿನಲಿ ಕನಕರತ್ನದ ಮಣಿಯ ।
ನಂದನ ಕಂದ ಮುಕುಂದನ ಚರಣವ ಅ.ಪ

ಅಂದುಗೆ ಕಿರುಗೆಜ್ಜೆ ಘಲಿರೆಂಬ ನಾದದಿ
ಬಂದು ಕಾಳಿಂಗನ ಹೆಡೆಯನೇರಿ ॥
ಧಿಂಧಿಮಿ ಧಿಮಿಕೆಂದು ತಾಳಗಳಿಂದಾ
ನಂದದಿ ಕುಣಿವ ಮುಕುಂದನ ಚರಣವ ೧

ಉಟ್ಟ ಪೀತಾಂಬರ ಉಡಿಯ ಕಾಂಚಿಯ ದಾಮ
ತೊಟ್ಟ ಮುತ್ತಿನ ಹಾರ ಕೌಸ್ತುಭವು ॥
ಕಟ್ಟಿದ ವೈಜಯಂತಿ ತುಲಸಿಯ ವನಮಾಲೆ
ಇಟ್ಟ ದ್ವಾದಶನಾಮ ನಿಗಮಗೋಚರನ ೨

ಕಿರುಬೆರಳಿನ ಮುದ್ರೆಯುಂಗುರ ಮುಂಗಡೆ
ಕರದಲಿ ಕಂಕಣ ನಳಿತೋಳುಗಳ ॥
ವರಚತುರ್ಭುಜ ಶಂಖಚಕ್ರದಿ ಮೆರೆವನ
ನಿರುತದಿ ಒಪ್ಪುವ ಕರುಣಾ ಮೂರುತಿಯ ೩

ಬಣ್ಣದ ತುಟಿ ಭಾವರಚನೆಯ ಸುಲಿಪಲ್ಲ
ಸಣ್ಣ ನಗೆಯ ನುಡಿ ಸವಿಮಾತಿನ ॥
ಪುಣ್ಯ ಚರಿತ್ರನ ಪೊಳೆವ ಕಿರೀಟನ
ಕಣ್ಣು ಮನ ತಣಿಯದ ಕಂಸಾರಿ ಕೃಷ್ಣನ ೪

ಮಂಗಳ ವರತುಂಗಭದ್ರದಿ ಮೆರೆವನ
ಅಂಗಜಪಿತ ಶ್ರೀ ಲಕ್ಷ್ಮೀಪತಿಯ ॥
ಶೃಂಗಾರ ಮೂರುತಿ ಪುರಂದರ ವಿಠಲನ
ಕಂಗಳಿಂದಲಿ ಕಂಡೆ ಹಿಂಗಿತು ಭವಭಯ ೫

## ೨೬೦

ಕಂಡೆ ನಾ ಗೋವಿಂದನ
ಪುಂಡರೀಕಾಕ್ಷ ಪಾಂಡವ ಪಕ್ಷನ ಪ

ಕೇಶವ ನಾರಾಯಣ ಶ್ರೀ ಕೃಷ್ಣನ
ವಾಸುದೇವ ಅಚ್ಯುತಾನಂತನ ॥
ಸಾಸಿರ ನಾಮದ ಶ್ರೀ ಹೃಷಿಕೇಶನ
ಶೇಷಶಯನ ನಮ್ಮ ವಸುದೇವ ಸುತನ ೧

ಮಾಧವ ಮಧುಸೂದನ ತ್ರಿವಿಕ್ರಮನ
ಯಾದವ ಕುಲಜನ ಮುನಿವಂದ್ಯನ ॥

ವೇದಾಂತ ವೇದ್ಯನ ಶ್ರೀ ಇಂದಿರೆ ರಮಣನ
–ನಾದಿ ಮೂರುತಿ ಪ್ರಹ್ಲಾದವರದನ ೨

ಪುರುಷೋತ್ತಮ ನರಹರಿ ಶ್ರೀಕೃಷ್ಣನ
ಶರಣಾಗತ ವಜ್ರಪಂಜರನ ॥
ಕರುಣಾಕರ ನಮ್ಮ ಪುರಂದರ ವಿಠಲನ
ನೆರೆ ನಂಬಿದೆನು ಬೇಲೂರ ಚೆನ್ನಿಗನ ೩

## ೨೬೧

ಕಣ್ಣಾರೆ ಕಂಡೆನಚ್ಯುತನ–ಕಂಚಿ
ಪುಣ್ಯ ಕೋಟಿ ಕರಿರಾಜವರದನ ಪ

ವರಮಣಿ ಮುಕುಟಮಸ್ತಕನ ಸುರ–
ವರ ಸನಕಾದಿ ವಂದಿತ ಪಾದಯುಗನ ॥
ತರುಣಿ ಲಕ್ಷ್ಮೀ ಮನೋಹರನ–ಪೀತಾಂ
ಬರದುಡಿಗೆಯಲಿ ರಂಜಿಸುವ ವಿಗ್ರಹನ ೧

ಕಸ್ತೂರಿ ಪೆರೆನೊಸಲವನ ತೋರ
ಮುತ್ತಿನ ಹಾರ ಪದಕವ ಧರಿಸಿದನ ॥
ಎತ್ತಿದಭಯ ಹಸ್ತದವನ ತನ್ನ
ಭಕ್ತರ ಸ್ತುತಿಗೆ ಹಾರಯಿಸಿ ಹಿಗ್ಗುವನ ೨

ನೀಲ ಮೇಘ ಶ್ಯಾಮಲನ ದೇವ
ಲೋಲ ಮಕರ ಕುಂಡಲ ಧರಿಸಿಹನ ॥
ಮೂಲೋಕದೊಳಗೆ ಚೆನ್ನಿಗನ ಕಮ
ಲಾಲಯಾಪತಿ ವೈಕುಂಠವಲ್ಲಭನ ೩

ಭಾನುಕೋಟಿ ತೇಜದವನ ಭವ
ಕಾನನ ರಾಶಿಗೆ ಹವ್ಯ ವಾಹನನ ॥
ದಾನವರೆದೆಯ ತಲ್ಲಣನ ಮುನಿ
ಮಾನಸ ಹಂಸನೆಂದೆನಿಸಿ ಮೆರೆವನ ೪

ತುಂಗ ಚತುರ್ಭುಜದವನ ಶುಭ
ಮಂಗಳ ರೇಖೆ ಅಂಗಾಲಲೊಪ್ಪುವನ ॥
ಶೃಂಗಾರ ಹಾರ ಕಂಧರನ ದೇವ
ಗಂಗೆಯ ಪಿತ ಪುರಂದರ ವಿಠಲನ ೫

## ೨೬೨

ಕರುಣಿಸಿ ಕೇಳು ಕಂದನ ಮಾತನು
ಗರುಡ ವಾಹನ ಗಂಗಾಜನಕ ಶ್ರೀಹರಿಯೇ ಪ

ಇತ್ತ ಬಾ ಎಂಬರಿಲ್ಲ ಇರವ ಕೇಳುವರಿಲ್ಲ
ಹತ್ತಿರ ಕುಳ್ಳಿರಿಸಿ ಆದರಿಪರಿಲ್ಲ ॥
ತತ್ತರ ಪಡುತಿಹೆ ತಾವರೆಲೆಯ ನೀರಂತೆ
ಹತ್ತು ನೂರು ನಾಮವ ಪೊತ್ತ ಶ್ರೀ ಹರಿಯೇ ೧

ಇಂದಿಗಶನವಿಲ್ಲ ನಿಂದಿರೆ ನೆರಳಿಲ್ಲ
ಒಂದೆ ಸುತ್ತಿಗೆ ತುಂಡು ಅರಿವೆಯಿಲ್ಲ ॥
ಬೆಂದೊಡಲಿಗೆ ಒಬ್ಬರಯ್ಯೋ ಎಂಬುವರಿಲ್ಲ
ಬಿಂದು ಮಾತ್ರದ ಸುಖ ಕಾಣೆ ನಾ ಹರಿಯೇ ೨

ಎಲ್ಲಿದ್ದರೆನಗೊಂದು ನೆಲೆಯಿಲ್ಲ ಶ್ರೀ ಹರಿ
ಅಲ್ಲ ತಿಂದಿಲಿಯಂತೆ ಬಳಲುವೆನೊ ॥
ಫುಲ್ಲಲೋಚನ ಪೂರ್ಣ ದಯದಿ ಸಲಹೊ ಎನ್ನ
ಸಲ್ಲದ ನಾಣ್ಯವ ಮಾಡುವರೆ ಹರಿಯೇ ೩

ನಖ ಶಿಖ ಪರ್ಯಂತ ನಾನಾ ಹಿಂಸೆಯ ಪಟ್ಟೆ
ಸುಖವೆಂಬುದನು ಕಾಣೆ ಸ್ವಪ್ನದಲು
ಮುಖವರಿಯದ ರಾಜ್ಯಕ್ಕೆನ್ನನು ಎಳತಂದು
ಕಕಮಕ ಮಾಡುವುದುಚಿತವೆ ಹರಿಯೇ ೪

ಇಷ್ಟುದಿವಸ ನಿನ್ನನೆನೆಯದ ಕಾರಣ
ಕಷ್ಟ ಪಟ್ಟೆನು ಸ್ವಾಮಿ ಕಾಯೊ ಎನ್ನ ॥

ಮುಟ್ಟಿ ಭಜಿಸಲಿಲ್ಲ ಮುರವೈರಿ ನೀ ದಯ
ವಿಟ್ಟು ಸಲಹೊ ಶ್ರೀ ಪುರಂದರ ವಿಠಲ ೫

## ೨೬೩

ಕರುಣಿಸೋ ರಂಗಾ ಕರುಣಿಸೋ ಪ

ಇರುಳು ಹಗಲು ನಿನ್ನ ಸ್ಮರಣೆ ಮರೆಯದಂತೆ ಅ.ಪ

ರುಕುಮಾಂಗದನಂತೆ ವ್ರತವನಾನರಿಯೆನು
ಶುಕಮುನಿಯಂತೆ ಸ್ತುತಿಸಲರಿಯೆ ॥
ಬಕವೈರಿಯಂತೆ ಧ್ಯಾನವ ಮಾಡಲರಿಯೆ ದೇ
ವಕಿಯಂತೆ ಮುದ್ದಿಸಲರಿಯೆನು ರಂಗಾ ೧

ಗರುಡನಂತೆ ಪೊತ್ತು ತಿರುಗಲರಿಯೆ ನಾನು
ಕರಿರಾಜನಂತೆ ಕರೆಯಲರಿಯೆ ॥
ವರಕಪಿಯಂತೆ ಸೇವೆಯ ಮಾಡಲರಿಯೆನು
ಸಿರಿಯಂತೆ ನಿನ್ನ ಮೆಚ್ಚಿಸಲರಿಯೆ ರಂಗಾ ೨

ಬಲಿಯಂತೆ ದಾನವ ಕೊಡಲರಿಯೆನು ಭಕ್ತಿ
ಛಲವನರಿಯೆ ಪ್ರಹ್ಲಾದನಂತೆ ॥
ಒಲಿಸಲರಿಯೆ ಅರ್ಜುನನಂತೆ ಸಖನಾಗಿ
ಸಲಹೋ ದೇವರದೇವ ಪುರಂದರ ವಿಠಲ ೩

## ೨೬೪

ಕರುಣಾಕರ ನೀನೆಂಬುವುದೆತಕೊ ।
ಭರವಸೆ ಇಲ್ಲೆನಗೆ ಪ

ಕರಿ ಧ್ರುವ ಬಲಿ ಪಾಂಚಾಲಿ ಅಹಲ್ಯೆಯ ।
ಪೊರೆದವ ಭವದಲಿ ನೀನಂತೆ ॥

ಅರಿತು ವಿಚಾರಿಸಿ ನೋಡಲಿದೆಲ್ಲವು ।
ಪರಿಪರಿ ಕಂತೆಗಳಂತಿದೆ ಕೃಷ್ಣ ೧

ಕರುಣಾಕರ ನೀನಾದರೆ ಈಗಲೆ ।
ಕರಪಿಡಿದೆನ್ನನು ನೀ ಕಾಯೊ ॥
ಸರಸಿಜಾಕ್ಷನೇ ಅರಸು ನೀನಾದರೆ ।
ದುರಿತಗಳೆನ್ನನು ಪೀಡಿಪುದುಂಟೆ ೨

ಮರಣ ಕಾಲದಲಿ ಅಜಮಿಳಗೊಲಿದೆಯೊ ।
ಗರುಡಧ್ವಜನೆಂಬ ಬಿರುದಿನಿಂದ ॥
ವರ ಬಿರುದುಗಳ್ನಿನಗುಳಿಯಬೇಕಾದರೆ ।
ತ್ವರಿತದಿ ಕಾಯೋ ಪುರಂದರವಿಠಲ ೫

## ೨೬೫

ಕೃಷ್ಣಮೂರ್ತಿ ಕಣ್ಣ ಮುಂದೆ ನಿಂತಿದಂತಿದೆ ಪ

ಮಸ್ತಕದಲಿ ಮಾಣಿಕದ ಕಿರೀಟ
ಕಸ್ತುರಿ ತಿಲಕವು ಹೊಳೆವ ಲಲಾಟ ॥
ಹಸ್ತದಿ ಕೊಳಲನೂದುವನರೆ ನೋಟ
ಕೌಸ್ತುಭದೆಡಬಲದೊಳು ಲೋಲಾಟ ೧

ಮಘಮಘಿಸುವ ಸೊಬಗಿನ ಸುಳಿಗುರುಳು
ಚಿಗುರು ತುಳಸಿವನ ಮಾಲೆಯಿಟ್ಟ ಕೊರಳು
ಉಗುರಿಗೆ ಹೊನ್ನ ಮುದ್ರಿಕೆಯಿಟ್ಟ ಬೆರಳು
ಸೊಗಸಿನ ನಾಭಿಯು ತಾವರೆ ಅರಳು ೨

ಉಡಿದಾರ ಒಡ್ಯಾಣ ಸಕಲಾಭರಣ
ಬೆಡಗಿನ ಪೀತಾಂಬರ ರವಿಕಿರಣ ॥
ಕಡಗ ಗಗ್ಗರ ಗೆಜ್ಜೆ ಇಕ್ಕಿದ ಚರಣ
ಒಡೆಯ ಪುರಂದರ ವಿಠಲನ ಕರುಣ ೩

## ೨೬೬

ಕಾಯಬೇಕೆನ್ನ ಗೋಪಾಲ ಒಂದು ।
ಪಾಯವನರಿಯೆನು ಭಕುತರ ಪಾಲ ಪ

ಹಲವು ಜನ್ಮಗಳೆತ್ತಿ ಬಂದೆ–ಮಾಯಾ–।
ಮಲವೆಂಬುದರಿಯದೆ ಭವದೊಳು ನೊಂದೆ ॥
ಬಲು ಭಯವಾಯಿತು ಮುಂದೆ–ನೀನು–।
ಸುಲಭನೆಂದು ಕೇಳಿ ಶರಣೆಂದೆ ತಂದೆ ೧

ವಿತ್ತದೊಳಗೆ ಮನವಿಟ್ಟು–ನಿನ್ನ–।
ಉತ್ತಮ ನಾಮದ ಸ್ಮರಣೆಯ ಬಿಟ್ಟು ॥
ಮತ್ತನಾದೆನು ಮತಿಗೆಟ್ಟು–ಇದ–।
ಚಿತ್ತದಲಿ ತಿಳಿದು ಬಲು ದಯವಿಟ್ಟು ೨

ಜರುಗಿದ ಪಾಪಂಗಳೆಲ್ಲ–ಅನ್ಯ–।
ನರರೇನ ಬಲ್ಲರು ಯಮಧರ್ಮ ಬಲ್ಲ ॥
ನರಕಕೆ ಒಳಗಾದೆನಲ್ಲ–ಸಿರಿ–।
ವರನಾರಾಯಣ ಪುರಂದರವಿಠಲ ೩

## ೨೬೭

ಕಾಯಲಾರೆನು ಕೃಷ್ಣಕಂಡವರ ಬಾಗಿಲನು ।
ನಾಯಿ ಕುನ್ನಿಗಳಂತೆ ಪರರ ಪೀಡಿಸುತೆ ಪ

ಉದಯಕಾಲದಲೆದ್ದು ಸಂಧ್ಯಾವಿಧಿಯ ಬಿಟ್ಟು ।
ಪದುಮನಾಭನ ಪಾದಸ್ಮರಣೆ ಮೊದಲಿಲ್ಲದೆ ॥
ಮುದದಿ ನಿನ್ನರ್ಚಿಸದೆ ನರರ ಸದವನ ಪೊಕ್ಕು ।
ಒದಗಿ ಸೇವೆಯ ಮಾಡಿ ಅವರ ಬಾಗಿಲನು ೧

ಕಲ್ಲಕರಗಿಸಬಹುದು ಹುರಿಗಡಲೆಯನು ಅರೆದು ।
ತೈಲವನು ತೆಗೆದಾದರುಣಲು ಬಹುದು ॥
ಬಲ್ಲಿದವರಾ ಮನಸು ಮೆಚ್ಚಿಸಲರಿಯೆನೈ ।
ಹಲ್ಲು ಕಿರಿಯುತಲಿ ಹಂಬಲಿಸಿ ಬಾಯ್ಬಿಡುತ ೨

ಇಂತು ನಾನಾ ಚಿಂತೆಯಲಿ ನಿನ್ನ ನೆನೆಯದೆ ।
ಭ್ರಾಂತಿಯೆಂತೆಂಬ ಹೆಬ್ಬಲೆಯೊಳು ಸಿಲುಕಿ ।
ಅಂತ್ಯವ ನಾ ಕಾಣೆ ಆದರಿಸುವರಿಲ್ಲ ।
ಚಿಂತೆಯ ಬಿಡಿಸಯ್ಯ ಪುರಂದರ ವಿಠಲ ೩

## ೨೬೮

ಕೆಟ್ಟೆನಲ್ಲೊ ಹರಿಯೆ ।
ಸಿಟ್ಟು ಮಾಡಿ ಎನ್ನ ಬಿಟ್ಟು ಕಳೆಯ ಬೇಡ ಪ

ಬಂದೆನು ನಾ ತಂದೆ ತಾಯಿಗಳುದರದಿ ।
ಒಂದನೂ ಅರಿಯದೆ ಬಾಲಕತನದೊಳು ॥
ಮುಂದುವರಿದ ಯೌವನದೊಳು ಸತಿ ಸುತ–।
ರಂದವ ನೋಡುತ ನಿನ್ನ ನಾ ಮರೆತೆನೊ ೧

ಸ್ನಾನ ಸಂಧ್ಯಾನವು ಹೀನವಾಯಿತು ಬಹು–।
ಮಾನವಿಲ್ಲದೆ ಕುಲಹೀನರಾಶ್ರಯದಿಂದ ॥
ಜ್ಞಾನಿಗಳೊಡನಾಟವಿಲ್ಲದೆ ಮನದೊಳು ।
ದಾನ–ಧರ್ಮದ ಬಟ್ಟೆಯೆಂತೆಂದು ಮರೆತೆನು ೨

ಮೊದಲೆ ಬುದ್ಧಿಯು ಹೀನ ಅದರೊಳು ವೃದ್ಧಾಪ್ಯ ।
ಕದನವು ದಶದಿಕ್ಕಿನುದಯದ ರಾಯರ ॥
ಎದೆನೀರು ಬತ್ತಿತು ಅದರಿಂದ ನಿನ್ನಯ ।
ಪದಪದ್ಮಯುಗಳದ ತುದಿಯ ನಾ ಮರೆತೆನು ೩

ಮೂಢನಾದೆನು ನಿನ್ನ ಬೇಡಿಕೊಳ್ಳದೆ ನಾನು ।
ಕಾಡೊಳಗಾಡುವ ಮೃಗದಂತೆ ಜೀವಿಸಿ ॥

ಗೂಡೊಳಗಿರುತಿಹ ಗೂಬೆಯ ತೆರನಂತೆ ।
ಮಾಡದೆ ನಿನ್ನಯ ಸ್ಮರಣೆಯ ಮರೆತೆನು ೪

ಬುದ್ಧಿಹೀನನು ನಾನು ಉದ್ಧರಿಸೆಲೊ ದೇವ
ಮುದ್ದು ಶ್ರೀ ಪುರಂದರ ವಿಠಲನೆನ್ನ ॥
ಬುದ್ಧಿಯೊಳಡಗಿಯೆ ತಿದ್ದಿಟ್ಟು ನಡೆಸಯ್ಯ ।
ಪೊದ್ದುವೆ ನಿನ್ನಯ ಚರಣಾರವಿಂದವ ೫

## ೨೬೯

ಕೊಡು ಕಂಡೆಯಾ ಹರಿಯೆ–ನಿನ್ನ ನಾಮ–।
ಕೊಡು ಕಂಡೆಯಾ ಹರಿಯೆ ಪ

ಬಡವ ನಾನೆಂದು ಕಾಡಲಿಲ್ಲ ಹರಿಯೆ ಅ.ಪ

ಒಡಲು ತುಂಬದು ಎಂದು ಬಳಲಿಸೆ ಬರಲಿಲ್ಲ ।
ಸಡಗರದಿಂ ಭಾಗ್ಯ ಬೇಡಲಿಲ್ಲ ॥
ಮಡದಿ–ಮಕ್ಕಳಿಗಾಗಿ ಕಡು ಮೋಹವೆನಗಿಲ್ಲ ।
ಬಿಡದೆ ನಾಮಸ್ಮರಣೆ ಕೊಡು ಒಂದೇ ಸಾಕೊ ೧

ಸ್ನಾನ ಮೌನ ಜಪ ತಪಗಳು ಎನಗಿಲ್ಲ ।
ನಾನಾಯೋನಿಗಳಲ್ಲಿ ಬಳಲಿ ಬಂದೆ ॥
ದೀನರಕ್ಷಕ ನೀನೆ ದಯದಿಂದಲೆನಗಿನ್ನು ।
ಧ್ಯಾನಸುಧೆಯನಿತ್ತು ಸಲಹಯ್ಯ ಹರಿಯೆ ೨

ಬಲೆಗೆ ಸಿಲುಕಿದ ಮೃಗದಂತೆ ಬಾಯ್ಬಿಡುತಲಿ ।
ಅಲಸಿ ಕೋಟಲೆಯ ಸಂಸಾರದಿಂದ ।
ತಲೆಹುಳಿತ ನಾಯಂತೆ ಬಯಲಾಸೆಗೆ ಸಿಲುಕಿದೆ ।
ಸಲಹೊ ದೇವರ ದೇವ ಪುರಂದರ ವಿಠಲ ೩

## ೨೭೦

ಕೊಡುವುದೆಂದು ಎನ್ನ ಕೊಂಬುದೆಂದು ಕೈ–।
ಪಿಡಿವುದೆಂದು ನೀ ಒಲಿವುದೆಂದು ಪ

ಕೊಡುಕೊಂಬ ಮಹದನುಗ್ರಹದವನೆಂದು ನಿ–।
ನ್ನಡಿಗೆ ಸೇರಿದೆನಯ್ಯ ಬಡತನಕೌಷಧ ಅ.ಪ

ಶ್ವಾನಸೂಕರ ಜನ್ಮ ನಾನುಂಬೆ ನನ್ನಲ್ಲಿ ।
ನೀನೇ ತತ್ತದ್ರೂಪನಾದೆಯಲ್ಲ ॥
ಹೀನರೊಳ್ ನಾನತಿ ಹೀನನಾಗಿ–ಅಭಿ–।
ಮಾನಿಯಾಗಿ ಕಾಲಕಳೆದೆನಲ್ಲ ॥
ವಾನರನಂಗೈಯ ಮಾಣಿಕ್ಯದಂತೆನ್ನ ।
ಮಾನದಂತರ್ಯಾಮಿ ಸಿಕ್ಕೆಯಲ್ಲ ॥
ಏನೇ ಆದರು ನಿನ್ನೊಳೆನಗೆ ಮುಂದೆ ಭಕ್ತಿ–।
ಜ್ಞಾನ–ವೈರಾಗ್ಯ ಭಾಗ್ಯಗಳನು ದೇವ ೧

ಕಾಡಿನ ಮೃಗವು ತಾ ಹಾಡಿದರೆ ನಂಬಿ ।
ಆಡುವುದಲ್ಲದೆ ಓಡುವುದೆ? ॥
ಕಾಡುವ ಪಶುವಿನ ಬಾಲವ ಕಟ್ಟಿಸಿ ।
ಕೂಡೆ ಪಾಲ್ಗರೆಯಲು ಒದೆಯುವುದೆ? ॥
ಆಡುವ ಶಿಶು ತಪ್ಪಮಾಡಲು ಜನನಿ–ಕೊಂ–।
ಡಾಡುವಳಲ್ಲದೆ ದೂಡುವಳೆ ॥
ಮೂಢ ಬುದ್ಧಿಯೊಳು ಕೆಟ್ಟೆನೆಂದು–ಕೋಪ ।
ಮಾಡಬೇಡ ದಯೆಮಾಡಿ ನೀಡಿಷ್ಟವ ೨

ಹಣ್ಣಾದ ಹೊತ್ತು ಬಾಯ್ ಹುಣ್ಣಾದ ತೆರನಂತೆ ।
ನಿನ್ನ ಸೇರುವ ಯತ್ನ ಬಿಟ್ಟು ನಾನು ॥
ಹೆಣ್ಣು ಹೊನ್ನು ಮಣ್ಣಿಗಾಗಿಯೆ ಭ್ರಮೆಗೊಂಡೆ ।
ಸುಣ್ಣಕಿಕ್ಕಿದ ನೀರಿನಂತಾದೆನು ॥

ಎನ್ನಪರಾಧವನಂತ ಕ್ಷಮಿಸು ನೀನು ।
ಮನ್ನಿಸದಿರಲಾರಿಗೆ ಪೇಳ್ವೆನು ॥
ಓಂ ನಮೋ ಶ್ರೀ ಹರಿ ಎಂಬ ಪೂರ್ಣಜ್ಞಾನ–।
ವನ್ನು ಪುರಂದರವಿಠಲನೆ ಎನ್ನಪ್ಪನೆ 3

## ೨೭೧

ಗರುಡ ಗಮನ ಬಂದನೋ–ನೋಡಿರೊ ಬೇಗ
ಗರುಡ ಗಮನ ಬಂದನೋ ಪ

ಗರುಡ ಗಮನ ಬಂದ ಧರಣಿಯಿಂದೊಪ್ಪುತ
ಕರೆದು ಬಾರೆನ್ನುತ ವರಗಳ ಬೀರುತ ಅ.ಪ

ಎನ್ನ ರಕ್ಷಿಪ ದೊರೆ ಇಲ್ಲಿಗೆ ತಾ ಬಂದ
ಚಿನ್ನದೊಲ್ ಪೊಳೆವ ವಿಹಂಗ ರಥದಲಿ ॥
ಘನ್ನ ಮಹಿಮ ಬಂಧಚ್ಛಿನ್ನ ಮೂರುತಿ ಬಂದ
ಸಣ್ಣ ಕೃಷ್ಣನು ಬಂದ ಬೆಣ್ಣೆಗಳ್ಳನು ಬಂದ ೧

ಪಕ್ಷಿವಾಹನ ಬಂದ ಲಕ್ಷ್ಮೀಪತಿಯು ಬಂದ
ಕುಕ್ಷಿಯೊಳೀರೇಳು ಜಗವನಿಟ್ಟವ ಬಂದ ॥
ಸೂಕ್ಷ್ಮ–ಸ್ಥೂಲದೊಳಗಿರುವನು ತಾ ಬಂದ
ಸಾಕ್ಷೀಭೂತನಾದ ಸರ್ವೇಶ್ವರ ಬಂದ ೨

ತಂದೆ ಪುರಂದರ ವಿಠಲರಾಯ ಬಂದ
ಬಂದು ನಿಂದು ನಲಿದಾಡುತಿಹ ॥
ಅಂದು ಸಾಂದೀಪನ ನಂದನನ ತಂದಿತ್ತ
ಸಿಂಧುಶಯನ ಆನಂದ ಮೂರುತಿ ಬಂದ ೩

## ೨೭೨

ಚಿಹಿ ಹಳಿ – ಥೂ ಖೋಡಿ ಪಾಪಿ ಮನವೇ ಇಂಥ–।
ಕುಹಕ ಬುದ್ಧಿಯ ನೀ ಬಿಡು ಕಾಣೋ ಮನವೇ ಪ

ಬಣ್ಣದ ಬೀಸಣಿಕೆಯಂತೆ ಹೆಣ್ಣು ತಿರುಗುವುದು ಕಂಡು ।
ಕಣ್ಣ ಸನ್ನೆಮಾಡಿ ಕೈಯ ಹೊನ್ನ ತೋರಿಸಿ ॥
ತಣ್ಣೀರು ಹೊಯ್ದ ಹೊಸ ಸುಣ್ಣದಂದದಿ ಕುದಿದು ಕುದಿದು ।
ಕಣ್ಣಿನೊಳು ಮಣ್ಣ ಚೆಲ್ಲಿ ಕೊಂಬರೇ ಮನವೆ ೧

ಪಗಡೆ ಚದುರಂಗ ಲೆತ್ತವನಾಡೆ ಕರೆದರೆ ।
ನಿಗುರಿದುವು ಕರ್ಣಗಳು ಮೊಚ್ಚೆಯಂತೆ ॥
ಜಗದೀಶ್ವರನ ದಿನದಿ ಜಾಗರಕೆ ಕರೆದರೆ ।
ಮುಗಿಲ ಹರಿದು ಧರೆಗಿಳಿದಂತೆ ಮನವೇ ೨

ವಾಸುದೇವನ ಪೂಜೆ ಒಮ್ಮೆ ಮಾಡೆಂದರೆ ।
ಬೇಸತ್ತು ತಲೆಯ ಚಿಟ್ಟಿಕ್ಕಿ ಕುಳಿತೆ ॥
ಆ ಸಮಯದಲೊಬ್ಬ ಕಾಸು ಕೊಡಲು ಅವನ ।
ದಾಸಿಯ ಮಗನಂತೆ ಬೆಂಬಿಡದೆ ಮನವೇ ೩

ನೆರೆಮನೆ ಹೊರಮನೆ ಪ್ರಸ್ತವಾದರೆ ಅವರು ।
ಕರೆಯದ ಮುನ್ನವೆ ಹೊರಹೊರಟೆ ॥
ಬರಿಗಂಟು ಬರಿಮಾತು ಸುಳ್ಳುಸುದ್ದಿಯ ಹೇಳಿ ।
ಹಿರಿಯ ಮಗನಂತೊಡಲ ಹೊರಕೊಂಬೆ ಮನವೆ ೪

ಬಿಂದು ಮಾತ್ರವೆ ಸುಖ–ದುಃಖ ಪರ್ವತದಷ್ಟು ।
ಸಂದೇಹ ವಿಲ್ಲವಿದು ಶಾಸ್ತ್ರಸಿದ್ಧ ॥
ಎಂದೆಂದಿಗೂ ನಮ್ಮ ಪುರಂದರವಿಠಲನ ।
ಹೊಂದಿಹೊಂದಿ ನೀ ಸುಖಬಾಳೊ ಮನವೆ ೫

## ೨೭೩

ಜಯ ಪಾಂಡುರಂಗ – ನಾ ನಿನ್ನ ಮನಕೆ ಬಾರೆನೆ ಪ

ನಾ ನಿನ್ನ ಮನಕೆ ಬಾರೆನೆ ಬಂದರೆ ಈ ಭವದ
ಬಲೆಯೊಳು ಸಿಲುಕುವೆನೆ – ಜಯ ಪಾಂಡುರಂಗ ಅ.ಪ

ಕೆಟ್ಟ ಕಿರಾತನ ಬೆಟ್ಟದಂಥ ಪಾಪವ
ಸುಟ್ಟು ವಾಲ್ಮೀಕಿ ಮುನಿಯೆನಿಸಿದೆ ೧

ಅಂತ್ಯಸಮಯದಲ್ಲಿ ಅತಿ ಭ್ರಷ್ಟ ಅಜಾಮಿಳಗೆ
ಅಂತಕನ ಬಾಧೆಯ ಬಿಡಿಸಿದೆಯೊ ೨

ತಂದೆ ತಾಯ್ಗಳನು ತೊರೆದ ಧ್ರುವನಿಗೆ
ಚೆಂದದಿಂದ ಮಾರ್ಗವ ತೋರಿದೆಯೊ ೩

ಪಂಕಜನಾಭನೆ ಕುಬುಜೆಯ ಡೊಂಕ ತಿದ್ದಿ
ಶಂಕೆಯಿಲ್ಲದೆ ಅವಳ ಕೂಡಿದೆಯೊ ೪

ತೊತ್ತಿನ ಮಗನ ಮನೆಯಕುಡಿತೆಪಾಲನು ಸವಿದು
ಮತ್ತವಗೆ ಮುಕ್ತಿಯ ತೋರಿದೆಯೊ ೫

ಐದು ಮಂದಿಯ ಕೂಡ ಸರಸವು ದ್ರೌಪದಿಗೆ
ಐದೆ ಲಜ್ಜೆಯ ಕಾಯ್ದೆಯೊ ೬

ದೀನರನುದ್ಧರಿಪ ಪುರಂದರ ವಿಠಲ
ಏನು ಕಾರಣ ನನ್ನ ಮರೆತೆಯೊ ೭

## ೨೭೪

ತಪ್ಪುಗಳನೆಲ್ಲ ನೀನೊಪ್ಪಿಕೊಳ್ಳೊ – ನ–।
ಮ್ಮಪ್ಪ ಕಾಯಬೇಕು ತಿಮ್ಮಪ್ಪ ನೀನೆ ಪ

ಸತಿ ಸುತ ಸಂಸಾರಗಳಿಗೆ ।
ಮತಿಹೀನನಾದೆನು ವ್ಯರ್ಥ ॥

ಮಿತಿಗಾಣೆನಯ್ಯ ಎನ್ನ ಪಾಪಗಳಿಗೆ ।
ಗತಿಯದಾವುದು ಪೇಳೊ ಮುಂದೆನಗೆ ೧

ಬಿಸಿಲು ಬಿರುಮಳೆ ಗಾಳಿಯೊಳಗೆ–ಬಲು–।
ದೆಸೆಗೆಟ್ಟು ದೇವ ತಿರುಗಿದೆ ॥
ಹಸಿವು–ತೃಷೆಗಳು ಬಹು ಬಾಧಿಸಲು ।
ಹುಸಿಯಾಡಿದೆನಯ್ಯ ಹುಟ್ಟು ಮೊದಲು ೨

ಸ್ನಾನ ಸಂಧ್ಯಾವಂದನವರಿಯೆ ನಾನಾ ।
ದಾನ ಧರ್ಮದ ಗುರುತುತಿಳಿಯೆ ॥
ಹೀನಜನರ ಸಂಗವ ಮರೆಯೆ ಸು–।
ಜ್ಞಾನಿಗಳನು ಬಾಯೆಂದು ಕರೆಯೆ ೩

ಗಂಗೆ ಅಗ್ರೋದಕಗಳ ತಂದು ನಾ ।
ಮಂಗಳ ಮಜ್ಜನ ಮಾಡಲಿಲ್ಲವೆಂದೂ ॥
ಹೊಂಗೇದಗೆ ಪುಷ್ಪವನೊಂದು ಶ್ರೀ–।
ರಂಗಗರ್ಪಿಸಲಿಲ್ಲ ಕಾಯೊ ಬಂದು ೪

ಪೀತಾಂಬರದಿ ವಸ್ತ್ರಗಳಿಂದ ದಿವ್ಯ ।
ನೂತನವಾದ ಆಭರಣದಿಂದ ॥
ಪ್ರೀತಿಪಡಿಸಲಿಲ್ಲಾದರದಿಂದ ಹೇ–।
ಸೀತಾಪತೆ ಕೃಷ್ಣ ಹರಿಮುಕುಂದ ೫

ಗಂಧಾಕ್ಷತೆ ಪುಷ್ಪಗಳಿಂದ ಬರಿ ।
ಒಂದು ದಳ ಶ್ರೀ ತುಳಸಿಯಿಂದ ॥
ಇಂದಿರೇಶನ ಅರ್ಚಿಸದರಿಂದ –ಬಹು ।
ನೊಂದು ದೂರಾದೆ ಸದ್ಗತಿಯಿಂದ ೬

ಏಕಾರತಿ ಧೂಪಾರತಿಯ ಎಂದು ।
ಶ್ರೀಕಾಂತ ನಿನಗೆ ನಾ ಮಾಡಲಿಲ್ಲ ॥
ವ್ಯಾಕುಲದಲಿ ಹೋಯಿತು ಹೊತ್ತು ಬಂದು–।
ನೀ ಕರುಣಿಸು ಲಕ್ಷ್ಮೀರಮಣ ೭

ಪಾಯಸ ಪಂಚಭಕ್ಷ್ಯಗಳಿಂದ ಬಲು ।
ಆಯತವಾದ ಶಾಕಗಳಿಂದ ॥
ತೋಿವೆ ಶಾಲ್ಯನ್ನ ಸದ್ಘೃತದಿಂದ ಶ್ರೀ-।
ಮಾಯಾಪತಿಗೆ ಅರ್ಪಿಸಲಿಲ್ಲ ೮

ಮಂಗಳಾರತಿಯ ನಾ ಮಾಡಲಿಲ್ಲ ಜಯ-।
ಮಂಗಳವೆನ್ನುತ ಪಾಡಲಿಲ್ಲ ॥
ಕಂಗಳ ನೋಟದಿ ನೋಡಲಿಲ್ಲ ನರ-।
ಸಿಂಗ ನೀ ಬಾಯೆಂದು ಕರೆಯಲಿಲ್ಲ ೯

ಹರಿಯ ಪಾದಕೆ ಬಿದ್ದವನಲ್ಲ ನರ-।
ಹರಿಗೆ ಪ್ರದಕ್ಷಿಣೆ ಮಾಡಲಿಲ್ಲ ॥
ಹರಿದಿನದುಪವಾಸ ವ್ರತವು ಇಲ್ಲ ಬಲು ।
ಹರಿಯ ದಾಸರ ಸಂಗ ಎನಗಿಲ್ಲ ೧೦

ಹೋಮಾರ್ಚನೆ ಔಪಾಸನವೆಲ್ಲ ।
ನೇಮದಿಂದಲಿ ನಾ ಮಾಡಲಿಲ್ಲ ॥
ಕಾಮಾತುರನಾಗಿ ಕಂಡಕಂಡ ಕಡೆ ।
ಸ್ವಾಮಿಯ ಕಾಣದೆ ತಿರುಗಿದೆನೊ ೧೧

ಅತಿಥಿಗಳ್ ಬಂದರೆ ಮನೆಗೆ ಅಂದೆ ।
ಗತಿಯಿಲ್ಲವಯ್ಯ ಕೊಡುವುದಕೆ ॥
ಯತಿಯ ಕಂಡರೆ ನಿಂದಿಸಿದೆ ಶ್ರೀ ।
ರತಿಪತಿ ಪಿತ ನೀ ದಯ ಮಾಡೊ ೧೨

ಎಷ್ಟು ಹೇಳಲಿ ಎನ್ನವಗುಣವ ಅವು ।
ಅಷ್ಟು ಇಷ್ಟೆಂದು ಎಣಿಕೆಯಿಲ್ಲ ॥
ದೃಷ್ಟಿಯಿಂದ ನೋಡಿ ದಯ ಮಾಡೊ ಶ್ರೀ ।
ಬೆಟ್ಟದ ವೆಂಕಟ ಪುರಂದರವಿಠಲ ೧೩

## ೨೭೫

ತಲ್ಲಣಿಸದಿರು ಕಂಡ್ಯ ತಾಳು ಮನವೆ ಸ್ವಾಮಿ
ನಿಲ್ಲದಲೆ ರಕ್ಷಿಸುವ ಸಂದೇಹ ಬೇಡ ಪ

ಬೆಟ್ಟದ ತುದಿಯಲ್ಲಿ ಬೆಳೆದ ವೃಕ್ಷಂಗಳಿಗೆ
ಕಟ್ಟೆ ಕಟ್ಟುತ ನೀರ ಹೊಯ್ದವರಾರು
ಹುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದ ಮೇಲೆ
ಕೊಟ್ಟು ರಕ್ಷಿಸುವನು ಇದಕೆ ಸಂದೇಹ ಬೇಡ ೧

ಅಡವಿಯೊಳಗಾಡುವ ಮೃಗಜಾತಿ ಪಕ್ಷಿಗಳಿಗೆ
ಅಡಿಗಡಿಗೆ ಆಹಾರವಿತ್ತವರದಾರು
ಪಡೆದ ಜನನಿಯಂತೆ ಸಾರಥಿಯಾಗಿ ತಾ
ಬಿಡದೆ ರಕ್ಷಿಸುವನು ಇದಕೆ ಸಂದೇಹಬೇಡ ೨

ಕಲ್ಲೊಳಗೆ ಪುಟ್ಟಿ ಕೂಗುವ ಮಂಡೂಕಂಗಳಿಗೆ
ಅಲ್ಲಿ ಹೋಗಿ ಆಹಾರವಿತ್ತವರದಾರು
ಬಲ್ಲಿದನು ಪುರಂದರವಿಠಲರಾಯ
ನಿಲ್ಲದೇ ರಕ್ಷಿಪನು ಇದಕೆ ಸಂದೇಹಬೇಡ * ೩

## ೨೭೬

ತಾರಿಸೊ ಶ್ರೀಹರಿ ತಾರಿಸೊ ಪ

ತಾರಿಸೊ ಭವವ ನಿವಾರಿಸೊ ನಿನ್ನಡಿಯ
ತೋರಿಸೊ ವೈಕುಂಠ ಸೇರಿಸೋ ರಂಗಯ್ಯ ಅ.ಪ

ಪಾಪವಿನಾಶನ ಮಾಡುವಿ ನೀ
ತಾಪಸರನು ನಿತ್ಯ ಸಲಹುವಿ ॥
ವ್ಯಾಪಿಸಿ ಸರ್ವತ್ರ ನಿನ್ನವರನು ಕಾಯ್ದು
ಶ್ರೀ ಪಾಂಡುರಂಗ ಪರಮಾತ್ಮ ಮುಕುಂದ ೧

* ಈ ಕೀರ್ತನೆ ಕನಕದಾಸರ ಅಂಕಿತದಲ್ಲೂ ದೊರೆಯುತ್ತದೆ.

ಹಿರಣ್ಯಕಶಿಪುವನು ಸೀಳಿದೆ ಅವನ
ಕರುಳನು ಕೊರಳೊಳು ಹಾಕಿದೆ ॥
ದುರುಳ ಬುದ್ಧಿಯ ತಳೆದ ದೈತ್ಯಾಧಮನ ಕೊಂದ
ಕರುಣದಿಂದಲಿ ಕಂದಗೊಲಿದೆ ಗೋವಿಂದ ೨

ಅಸುರೆ ಪೂತನಿಯ ಸಂಹರಿಸಿದೆ ನೀ
ಶಶಿಮುಖಿಯಭಿಮಾನ ಕಾಯ್ದೆ ॥
ಶಿಶುವಾಗಿ ಬಾಲಲೀಲೆಗಳನು ತೋರಿದೆ
ಕುಸುಮನಾಭ ಶ್ರೀ ಪುರಂದರ ವಿಠಲ ೩

## ೨೭೭

ತೇಲಿಸೊ ಇಲ್ಲ ಮುಳುಗಿಸೊ ನಿನ್ನ ।
ಪಾಲಿಗೆ ಬಿದ್ದೆನೊ ಪರಮ ದಯಾಳೊ ಪ

ಸತಿ ಸುತ ಧನದಾಶೆ ಎಂತೆಂಬ ಮೋಹದಿ ।
ಹಿತದಿಂದ ಅತಿನೊಂದು ಬಳಲಿದೆನೊ ॥
ಗತಿಯನೀವರ ಕಾಣೆ ಮೊರೆಯ ಲಾಲಿಸೊ ಲಕ್ಷ್ಮೀ-।
ಪತಿ ನಿನ್ನ ಚರಣದ ಸ್ಮರಣೆಯಿತ್ತೆನ್ನ ೧

ಜರೆ ರೋಗ ದಾರಿದ್ರ್ಯ ಕಶ್ಮಲವೆಂತೆಂಬ ।
ಶರಧಿಯೊಳಗೆ ಬಿದ್ದು ಮುಳುಗಿದೆನೊ ॥
ಸ್ಥಿರವಲ್ಲ ಈ ದೇಹ ನೆರೆನಂಬಿದೆನು ನಿನ್ನ ।
ಕರುಣಾಭಯವನಿತ್ತು ಪಾಲಿಸೊ ಹರಿಯೆ ೨

ದೋಷವುಳ್ಳವ ನಾನು ಭಾಷೆಯುಳ್ಳವ ನೀನು ।
ಮೋಸ ಹೋದೆನೊ ಭಕ್ತಿರಸವ ಬಿಟ್ಟು ॥
ಶೇಷಶಯನ ಶ್ರೀ ಪುರಂದರ ವಿಠಲನೆ ।
ದಾಸರ ಸಂಗವಿತ್ತು ಪಾಲಿಸೊ ಹರಿಯೆ ೩

## ೨೭೮

ದಣಿಯ ನೋಡಿದೆನೋ ವೆಂಕಟನ ಮನ
ದಣಿಯ ನೋಡಿದೆ ಶಿಖಾಮಣಿಯ ನಿರ್ಮಲನ ಪ

ಕೇಸಕ್ಕಿ ಅನ್ನ ಉಂಬುವನ ದುಡ್ಡು
ಕಾಸು ಬಿಡದೆ ಹೊನ್ನುಗಳಿಸಿಕೊಂಬುವನ ॥
ದೋಸೆ ಅನ್ನವ ಮಾರಿಸುವನ
ತನ್ನ ದಾಸರ ಮೇಳದಿ ಕುಣಿದಾಡುತಿಹನ ೧

ಗಂಟಿನೊಲ್ಲಿಯ ಹೊದ್ದಿಹನ–ಹೊರ
ಹೊಂಟು ಹೋಗಿ ಬೇಟೆಯಾಡುತಲಿಹನ ॥
ಗಂಟೆ ನಾದಕೆ ಒಲಿಯುವನ ಭೂವೈ–
ಕುಂಠವಿದೆಂದು ಹಸ್ತವ ತೋರಿದವನ ೨

ಬೆಟ್ಟದೊಳಗೆ ಇರುತಿಹನ ಮನ
ಮುಟ್ಟಿ ಭಜಿಪ ಭಕುತರಿಗೊಲಿದವನ ॥
ಕೊಟ್ಟ ವರವ ತಪ್ಪದವನ ಈ
ಸೃಷ್ಟಿಗಧಿಕ ಪುರಂದರ ವಿಠಲನ ೩

## ೨೭೯

ದಯಮಾಡೋ ದಯಮಾಡೋ ದಯಮಾಡೋ ರಂಗ ಪ

ದಯಮಾಡೋ ನಾ ನಿನ್ನ ದಾಸನೆಂತೆಂದು ಅ.ಪ

ಹಲವು ಕಾಲವು ನಿನ್ನ ಹಂಬಲವೆನಗೆ
ಒಲಿದು ಪಾಲಿಸಬೇಕು ವಾರಿಜನಾಭ ೧

ಇಹಪರದಲಿ ನೀನೆ ಇಂದಿರೆರಮಣ
ಭಯವೇಕೋ ನೀನಿರಲು ಭಕ್ತರಭಿಮಾನಿ ೨

ಕರಿರಾಜವರದನೆ ಕಂದರ್ಪನಯ್ಯ
ಪುರಂದರವಿಠಲ ಸದ್ಗುಣ ಸಾರ್ವಭೌಮ ೩

## ೨೮೦

ದಯಮಾಡಿ ಸಲಹಯ್ಯ ಭಯನಿವಾರಣನೆ ।
ಹಯವದನ ನಾ ನಿನ್ನ ಚರಣ ನಂಬಿದೆ ಕೃಷ್ಣ ಪ

ಕ್ಷಣಕ್ಷಣಕೆ ನಾ ಮಾಡಿದಂಥ ಪಾಪಗಳೆಲ್ಲ ।
ಎಣಿಸಲಳವಲ್ಲಷ್ಟು ಇಷ್ಟು ಎಂದು ॥
ಫಣಿಶಾಹಿ ಅವಗುಣವ ನೋಡದೇ ಚರಣ ಸ್ಮ-
ರಣೆಯ ಮಾಡುವಂಥ ಭಕುತಿಯನಿತ್ತು ೧

ಕಂಡ ಕಂಡ ಕಡೆಗೆ ಪೋಪ ಚಂಚಲಮನಸು
ಲಂಡತನದಲಿ ಬಹಳ ಭ್ರಷ್ಟ ನಾನು ॥
ಭಂಡಾಟದವನೆಂದು ಬಹಿರಂಗಕೆಳೆಯದೆ ।
ಕೊಂಡಾಡುವಂಥ ಭಕುತಿಯನಿತ್ತು ಸಲಹಯ್ಯ ೨

ಜಾತಿಧರ್ಮವ ಬಿಟ್ಟು ಅಜಮಿಳನು ಇರತಿರಲು ।
ಪ್ರೀತಿಯಿಂದಲಿ ಮುಕುತಿಕೊಡಲಿಲ್ಲವೆ ॥
ಖ್ಯಾತಿಯನು ಕೇಳಿ ಮರೆಹೊಕ್ಕೆ ದಯಾನಿಧಿಯೆ ಬೆ ।
ನ್ನಾತು ಕಾಯಯ್ಯ ಶ್ರೀ ಪುರಂದರವಿಠಲ ೩

## ೨೮೧

ದಾರಿ ಏನಿದಕೆ ಮುರಾರಿ ನೀ ಕೈಯ ಹಿಡಿಯದಿದ್ದರೆ-।
ದಾರಿ ಏನಿದಕೆ ಮುರಾರಿ? ಪ

ಕಷ್ಟ ಕರ್ಮಂಗಳ ಎಷ್ಟಾದರು ಮಾಳ್ಪೆ ।
ಎಷ್ಟಾದರೂ ನುಡಿದೆ ಗುರುಹಿರಿಯರ ॥
ದುಷ್ಟರ ಸಂಗವ ಬಹಳ ಮಾಡಿದರಿಂದ ।
ಶಿಷ್ಟರ ಸೇವೆಯೆಂದರಾಗದೆನಗೆ ೧

ಪರರ ದೂಷಣೆ ಪರಪಾಪಂಗಳನೆಲ್ಲ ।
ಪರಿಪರಿಯಲ್ಲಿ ಆಡಿಕೊಂಬೆ ನಾನು ॥
ಹರಿನಾಮಾಮೃತವ ಹೇಳದೆ ಕೇಳದೆ ।
ಹರಟೆಯಲ್ಲಿ ಹೊತ್ತುಗಳೆದೆ ನಾ ಹರಿಯೆ ೨

ಪಾತಕ ಕರ್ಮಗಳ ಮಾಡಿದಜಾಮಿಳಗೆ ।
ಪ್ರೀತಿಯಿಂದಲಿ ಮುಕ್ತಿ ಕೊಡಲಿಲ್ಲವೆ? ॥
ನೂತನವೇಕಿನ್ನು ಸೂರ್ಯ ಮಂಡಲ ।
ರೀತಿಯಾದನು ಸಿರಿಪುರಂದರವಿಠಲ ೩

## ೨೮೨

ದಾರಿಯ ತೋರೊ ಮುಕುಂದ ಹರಿ ।
ನಾರಾಯಣ ಗೋವಿಂದ ಪ

ಬಂದೆನು ಬಹುಜನ್ಮದಲಿ ನಾ ।
ಬಂಧನದೊಳು ಸಿಲುಕುತಲಿ ॥
ಮುಂದಿನದಾವುದು ಪಯಣ ತೋರೊ ।
ಇಂದು ನೀ ಇಂದಿರೆರಮಣ ೧

ಗತಿಯಿಲ್ಲದವರಿಗೆ ನೀನೆ ಸದ್ ।
ಗತಿಯೆಂದು ಸ್ತುತಿಮಾಡಿದೆನೊ ॥
ಗತಿಯೆಂದು ನಂಬಿದೆ ನಿನ್ನ ।
ಸತುವ ತೋರು ನರಹರಿಯೆ ಗೋವಿಂದ ೨

ಮಡುವಿನೊಳಗೆ ಧುಮುಕಿದೆನೆ ಇನ್ನು
ಕಡೆಹಾಯಿಸುವರ ನಾ ಕಾಣೆ ॥
ಹಡೆದ ತಾಯಿ ತಂದೆ ನೀನೆ ಕೈ ।
ಹಿಡಿದು ಸಲಹೊ ಎನ್ನೊಡೆಯ ಮುರಾರಿ ೩

ಮಿಕ್ಕಿ ಬರುವ ಹೊಳೆಯೊಳಗೆ ನಾನು ।
ಸಿಕ್ಕಿದೆ ನಡುನೀರೊಳಗೆ ॥
ಕಕ್ಕುಲಾತಿ ನಿನಗಿರದೆ ।
ಭಕ್ತವತ್ಸಲ ನೀ ದಯಮಾಡೋ ೪

ಕುಕ್ಷಿಯೊಳಗೆ ಇಂಬಿಟ್ಟು ಎನ್ನ ।
ರಕ್ಷಿಸಿ ಸಲಹಬೇಕು ॥
ಅಕ್ಷಯ ಅನಂತ ಮಹಿಮನೆ – ನೀನು ।
ಪಕ್ಷಿವಾಹನನೆ ಪುರಂದರ ವಿಠಲ ೫

## ೨೮೩

ದಾರಿ ಯಾವುದಯ್ಯ ವೈಕುಂಠಕೆ
ದಾರಿ ತೋರಿಸಯ್ಯಾ ಪ

ದಾರಿ ಯಾವುದಯ್ಯಾ ದಾರಿ ತೋರಿಸು ಆ
ಧಾರ ಮೂರುತಿ ನಿನ್ನ ಪಾದ ಸೇರುವುದಕ್ಕೆ ಅ.ಪ

ಬಲುಭವದನುಭವದಿ ಕತ್ತಲೆಯೊಳು
ಬಲು ಅಂಜುತೆ ನಡುಗಿ ॥
ಬಳಲುತ ತಿರುಗಿದೆ ದಾರಿಯ ಕಾಣದೆ
ಹೊಳೆಯುವ ದಾರಿಯ ತೋರೊ ನಾರಾಯಣ ೧

ಪಾಪವ ಪೂರ್ವದಲಿ ಮಾಡಿದುದಕೆ
ಲೇಪವಾಗಿರೆ ಕರ್ಮ
ಈ ಪರಿಯಿಂದಲಿ ನಿನ್ನ ನೆನೆಸಿಕೊಂಬೆ
ಶ್ರೀಪತಿ ಸಲಹೆನ್ನ ಭೂಪ ನಾರಾಯಣ ೨

ಇನ್ನು ನಾ ಜನಿಸಲಾರೆ ಭೂಮಿಯ ಮೇಲೆ
ನಿನ್ನ ದಾಸನಾದೆನೊ॥
ಪನ್ನಗಶಯನ ಶ್ರೀ ಪುರಂದರ ವಿಠಲ
ಇನ್ನು ಪುಟ್ಟಿಸದಿರೊ ಎನ್ನ ನಾರಾಯಣ ೩

## ೨೮೪

ದಾಸ ಶೇಷಾದ್ರಿಯ ವಾಸ ತಿಮ್ಮಪ್ಪನ ।
ದಾಸನನು ಕರೆದೊಯ್ದು ॥
ಸಾಸಿರನಾಮ ವಿಲಾಸನ ಮೂರ್ತಿಯ ।
ಲೇಸಾಗಿ ತೋರೆನಗೆ ಪ

ಬೆರಳು ಇಲ್ಲದ ಕೈಯೊಳುಂಡು ಜೀವಿಸುವನ ।
ಶಿರದ ಅಂದದ ದೇವನ ॥
ಉರಿವ ಶಾಪಕೆ ತಾನು ಕಿರಿದಾಗಿ ಇರುವನ ।
ಶಿರದೊಳು ಧರಿಸಿದನ ॥
ಕೊರಳ ಮಾಲೆಯ ಪೆಸರೊಪ್ಪಿದ ಗಿರಿಯೊಳು ।
ಸ್ಥಿರವಾಗಿ ನೆಲಸಿಪ್ಪನ ॥
ಕರುಣವಾರಿಧಿ ವೆಂಕಟೇಶನ ಚರಣವ ।
ಕರೆದೊಯ್ದು ತೋರೆನಗೆ ೧

ವಾರಿಯೊಳುದಿಸಿದ ನಾರಿಯ ಮಧ್ಯದಿ ।
ಏರಿಯೆ ಕುಳಿತವನ ॥
ವಾರಿಜ ವದನದಿ ತೋರಿದ ಸಾರದಿ ।
ಮೂರೊಂದು ಪೆಸರವನ ॥
ಮೇರುವಿನಗ್ರದಿ ಊರಿದ ಚರಣವ ।
ಸಾರಿದವರ ಜೀವನ ॥
ಊರಿಗೆ ಕರೆದೊಯ್ದು ಶ್ರೀ ವೆಂಕಟೇಶ ಪ–॥
ದಾರವಿಂದವ ತೋರೆನಗೆ ೨

ಸೋತ ಮಾನಿನಿಯೊಳು ಜಾತವಾಗಿಯೆ ಮೇಲೆ ।
ಮಾತೆಯ ಸಲಹಿದನ ॥
ನೀತಿ ತಪ್ಪಿಯೆ ನಡೆವ ವಾತಭಕ್ಷಕರನ್ನು ।
ಘಾತಿಸಿ ತರಿದವನ ॥
ನೂತನವಾಗಿಹ ನಾಮ ಶೈಲದ ಮೇಲೆ ।

ಕಾತರದೊಳು ನಿಂದನ ॥
ಪಾತಕನಾಶನ ಶ್ರೀವೆಂಕಟೇಶನ ।
ರೀತಿಯ ತೋರೆನಗೆ ೩

ಋಷಿಯ ಮಕ್ಕಳನೆಲ್ಲ ಹಸಿವಿಗೆ ಗುರಿಮಾಡಿ ।
ವಶತಪ್ಪಿ ನಡೆವವನ ॥
ಬಸಿರೊಳಗುದಿಸಿಯೆ ಬಿಸಿಯನೆಲ್ಲವ ಅಂದು ।
ಎಸೆವ ಮಹಾವೀರನ ॥
ಪೆಸರೊಳಗೊಪ್ಪಿದ ಹಸನಾದ ಗಿರಿಯೊಳು ।
ಕುಶಲದಿ ನಿಂದವನ ॥
ನಸುಮುದ್ದು ಶ್ರೀ ವೆಂಕಟೇಶನ ಚರಣದ ।
ಬಿಸರುಹ ತೋರೆನಗೆ ೪

ಪಾದ ನಾಲ್ಕನು ಮೇದಿನಿಯೊಳಗೂರಿಯೆ ।
ಆದರಿಸುತ ಬಪ್ಪನ ಮೇ ॥
ಲಾದ ಪಾದವ ನಾಲ್ಕು ಅಂತರಿಕ್ಷದ ಮೇಲೆ ।
ಕಾದು ಕೊಳ್ಳುತಲಿಪ್ಪನ ॥
ಆದಿಯ ನಾಮಕ್ಕೆ ಅದ್ರಿಯನೊಡಗೊಂಡು ।
ಹಾದಿಯನಿತ್ತವನ ॥
ಸಾಧಿಸಿ ಇಂತಹ ಶ್ರೀ ವೆಂಕಟೇಶನ ।
ಪಾದವ ತೋರೆನಗೆ ೫

ಆದಿನಾರಾಯಣನೆಂಬ ಪರ್ವತವನು ।
ಭೇದಿಸಿ ನಿಂತವನ ॥
ಸಾಧಿಸಿ ಮುಂದಣ ವೆಂಕಟಾದ್ರಿಯ ಮೇಲೆ ।
ಪಾದವನೂರಿದನ ॥
ಮೇದಿನಿಯೊಳಗುಳ್ಳ ಸಾಧುಭಕ್ತರನೆಲ್ಲ ।
ಕಾದುಕೊಳ್ಳುತಲಿಪ್ಪನ – ವಿ ॥
ನೋದಮೂರುತಿಯಾದ ಶ್ರೀ ವೆಂಕಟೇಶನ ।
ಪಾದವ ತೋರೆನಗೆ ೬

ಅತ್ತೆಯ ವರಸೆಯೆ ಮತ್ತೆ ಅಳಿಯಗಾದ ।
ಪುತ್ರಿಯ ತಂದವನ ॥
ಉತ್ತಮವಾಗಿಹ ಮಗಳ ಸನ್ನಿಧಿಯಲ್ಲಿ ।
ನಿತ್ಯದೊಳಿರುತಿಪ್ಪನ ॥
ಬತ್ತಲೆಯಾಗಿಹ ಸತಿಯಳ ಸತ್ಯಕ್ಕೆ ।
ಪುತ್ರನೆಂದೆನಿಸಿದನ ॥
ಹತ್ತಿರ ಕರೆದೊಯ್ದು ಪುರಂದರವಿಠಲನ ।
ನಿತ್ಯದಿ ತೋರೆನಗೆ ೭

## ೨೮೫

ದಾಸನ ಮಾಡಿಕೋ ಎನ್ನ ಇಷ್ಟು
ಗಾಸಿ ಮಾಡುವುದೇಕೆ ದಯದಿ ಸಂಪನ್ನ ಪ

ದುರುಳ ಬುದ್ಧಿಗಳೆಲ್ಲ ಬಿಡಿಸೋ ನಿನ್ನ
ಕರುಣ ಕವಚವೆನ್ನ ಹರಣಕ್ಕೆ ತೊಡಿಸೋ ॥
ಚರಣದ ಸೇವೆಯ ಕೊಡಿಸೋ ಅಭಯ–
ಕರ ಮೇಲಿನ ಕುಸುಮ ಶಿರದ ಮೇಲಿರಿಸೋ ೧

ದೃಢಭಕ್ತಿಯಿಂದ ನಾ ಬೇಡಿ ನಿನ್ನ
ಅಡಿಯೊಳೆರಗುವೆನಯ್ಯ ಅನುದಿನ ಪಾಡಿ ॥
ಕಡೆಗಣ್ಣೊಳೇಕೆನ್ನ ನೋಡಿ ಬಿಡುವೆ
ಕೊಡು ನಿನ್ನ ಪರಭಕ್ತಿ ಮನ ಮಡಿ ಮಾಡಿ ೨

ಮರೆಹೊಕ್ಕವರ ಕಾವ ಬಿರುದು ನೀನು
ಕರುಣದಿ ರಕ್ಷಣೆ ಮಾಡೆನ್ನ ಪೊರೆದು ॥
ದುರಿತ ರಾಶಿಗಳೆಲ್ಲ ತರಿದು ಒಡೆಯ
ಪುರಂದರವಿಠಲನೆ ಹರುಷದಿ ಕರೆದು ೩

## ೨೮೬

ದಾಸನ ಮಾಡಿಕೊ ಎನ್ನ – ದಿವ್ಯ
ಸಾಸಿರ ನಾಮದ ವೆಂಕಟಭೂಪರನ್ನ ಪ

ಭವಭಯ ದುಃಖವ ಬಿಡಿಸೋ– ನಿನ್ನ
ಕರುಣವಿದ್ಯೆಯನೆನ್ನ ಅಂಗಕ್ಕೆ ತೊಡಿಸೋ ॥
ಆವಾಗಲೂ ನಿನ ನಾಮ ನುಡಿಸೋ – ನಿನ್ನ
ಚರಣ ಕಮಲದಲ್ಲಿ ಆರಡಿಯೆನಿಸೊ ೧

ಗಂಗೆಯ ಪಡೆದಂಥ ಪಾದ ವರ
ಶೃಂಗಾರ ಲಕ್ಷ್ಮಿ ಸ್ಮರಿಸುವಂಥ ಪಾದ ॥
ಬಂಗಾರ ರಂಜಿತ ಪಾದ – ಹರಿ
ಮಂಗಳ ಸದ್ಗತಿಗೆ ಚಂದಿರನಾದ ೨

ಸೆರಗೊಡ್ಡಿ ನಾ ಬೇಡಿಕೊಂಬೆ – ನಿನ್ನ
ಹರಿವಾಣದೆಂಜಲ ನಾನು ಉಂಡೇನೆಂದೆ ॥
ಬಿರುದು ನಿನ್ನದು ಹುಸಿ ಮಾಡದೆ – ನಮ್ಮ
ಪುರಂದರ ವಿಠಲ ದಯಮಾಡೊ ತಂದೆ ೩

## ೨೮೭

ಧಾನ್ಯ ದೊರಕಿತು ಎನಗೆ
ಧನವು ದೊರಕಿತು ಪ

ಓಣಿಯೊಳಗೆ ಹೋದ ಮಾ–
ಣಿಕ್ಯದ ಹರಳು ದೊರಕಿತೋ ಅ.ಪ

ಕಟ್ಟಿ ಹಗೆಯ ಹಾಕುವುದಲ್ಲ
ಒಟ್ಟಿ ಕೆಸರ ಬಡಿಯುವುದಲ್ಲ ॥
ಮುಟ್ಟಿ ಹಿರಿದು ಮೇಯಿಸಿದರೊಂ
ದಿಷ್ಟು ಸೂಡು ಸವಿಯಲಿಲ್ಲ ೧

ಹರಿದು ಗೋಣಸು ಹಚ್ಚುವುದಲ್ಲ
ಮುರಿದು ಸಣ್ಣಗೆ ಮಾಡುವುದಲ್ಲ ॥
ಅರಿದು ಇದನು ಪೇಟೆಗೆ ಒಯ್ದರೆ
ಕರೆದು ಬೆಲೆಯನು ಕಟ್ಟುವುದಲ್ಲ ೨

ಪಾಲು ಪಸುಗೆ ಹಂಚುವುದಲ್ಲ
ಮೇಲೆ ಚಾರರು ಒಯ್ಯುವುದಲ್ಲ ॥
ಶ್ರೀಲೋಲ ಪುರಂದರ ವಿಠಲನ
ಮೂಲನಾಮ ದೊರಕಿತಲ್ಲ ೩

## ೨೮೮

ದೇವ ಬಂದ ನಮ್ಮ ಸ್ವಾಮಿ ಬಂದನೋ
ದೇವರ ದೇವ ಶಿಖಾಮಣಿ ಬಂದನೋ ಪ

ಉರಗಶಯನ ಬಂದ ಗರುಡ ಗಮನ ಬಂದ
ನರಗೊಲಿದವ ಬಂದ ನಾರಾಯಣ ಬಂದ ೧

ಮಂದರೋದ್ಧಾರ ಬಂದ ಮಾಮನೋಹರ ಬಂದ
ವೃಂದಾವನಪತಿ ಗೋವಿಂದ ಬಂದ ೨

ನಕ್ರಹರನು ಬಂದ ಚಕ್ರಧರನು ಬಂದ
ಅಕ್ರೂರಗೊಲಿದ ತ್ರಿವಿಕ್ರಮ ಬಂದ ೩

ಪಕ್ಷಿವಾಹನ ಬಂದ ಲಕ್ಷ್ಮಣಾಗ್ರಜ ಬಂದ
ಅಕ್ಷಯ ಫಲದ ಶ್ರೀ ಲಕ್ಷ್ಮೀ ರಮಣ ಬಂದ ೪

ನಿಗಮಗೋಚರ ಬಂದ ನಿತ್ಯತೃಪ್ತನು ಬಂದ
ನಗೆ ಮುಖ ಪುರಂದರ ವಿಠಲ ಬಂದನೋ ೫

## ೨೮೯

ನಂಬಿದೆ ನಿನ್ನ ಪಾದವ – ವೆಂಕಟರಮಣ
ನಂಬಿದೆ ನಿನ್ನ ಪಾದವ ॥ ಪ

ನಂಬಿದೆ ನಿನ್ನ ಪದಾಂಬುಜಯುಗಳವ
ಇಂಬಿತ್ತು ಸಲಹಯ್ಯ ಶಂಖ–ಚಕ್ರಧರನೆ ಅ.ಪ

ತಂದೆಯು ನೀನೆ ತಾಯಿಯು ನೀನೆ
ಬಂಧು ಬಳಗವು ನೀನೆ ॥
ಬಂದ ದುರಿತವೆನ್ನ ಹೊದ್ದಿಕೊಳ್ಳದಂತೆ
ತಂದೆ ಸಲಹೊ ಮುಕುಂದ ಮುರಾರಿ ೧

ಚಿಕ್ಕಂದು ಮೊದಲು ನಾನು ನಿನ್ನಯ ಪಾದ
ಹೊಕ್ಕು ಜೀವಿಸುತಿಹೆನು ॥
ಗಕ್ಕನೆ ಜ್ಞಾನವನಕ್ಕರೆಯಲಿ ಕೊಡು
ಮಕ್ಕಳ ಮಾಣಿಕ್ಯ ರುಕ್ಮಿಣಿಯರಸಾ ೨

ಮರೆತು ನಾ ಮಾಯೆಯೊಳು ಮುಳುಗಿದೆ ಅದ
ನರಿತು ಅರಿಯದಾದೆ ॥
ಮರೆಯದೆ ಎನ್ನನು ಪೊರೆಯೊ ಕೃಪಾನಿಧಿ
ವರದ ಶ್ರೀವೆಂಕಟ ಪುರಂದರ ವಿಠಲ ೩

## ೨೯೦

ನಾ ನಿನಗೇನ ಬೇಡುವುದಿಲ್ಲ – ಎನ್ನ
ಹೃದಯಕಮಲದೊಳು ನೆಲಸಿರು ಹರಿಯೆ ಪ

ಶಿರ ನಿನ್ನ ಚರಣಕೆರಗಲಿ –ಚಕ್ಷು
ಎರಕದಿಂದಲಿ ನಿನ್ನ ನೋಡಲಿ ಹರಿಯೆ ॥
ನಿರುಮಾಲ್ಯ ನಾಸ ಘ್ರಾಣಿಸಲಿ –ಎನ್ನ
ಕರಣ ಗೀತಂಗಳ ಕೇಳಲಿ ಹರಿಯೆ ೧

ನಾಲಿಗೆ ನಿನ್ನ ಕೊಂಡಾಡಲಿ ಎನ್ನ
ತೋಳು ಕರಂಗಳ ಮುಗಿಯಲಿ ಹರಿಯೆ ॥
ಕಾಲು ತೀರ್ಥಯಾತ್ರೆಗೆ ಪೋಗಲಿ –ಮನ
ಓಲೈಸಿ ನಿನ್ನನು ಸ್ಮರಿಸಲಿ ಹರಿಯೆ ೨

ಚಿತ್ತ ನಿನ್ನೊಳು ಮುಳುಗಾಡಲಿ –ನಿನ್ನ
ಭಕ್ತ ಜನರ ಸಂಗ ದೊರಕಲಿ ಹರಿಯೆ ॥
ತತ್ವಯೋಗಾಭ್ಯಾಸಕ್ಕಾಗಲಿ –ಉಕ್ಕಿ
ಸತ್ಯ ಮೂರುತಿ ನಮ್ಮ ಪುರಂದರ ವಿಠಲ * ೩

## ೨೯೧

ನಾನೇಕೆ ಬಡವನೊ –ನಾನೇಕೆ ಪರದೇಶಿ
ನೀನಿರುವತನಕ ಹರಿಯೇ ಪ

ಪುಟ್ಟಿಸಿದ ತಾಯ್ತಂದೆ ಇಷ್ಟಮಿತ್ರರು ನೀನೆ
ಅಷ್ಟೆಲ್ಲ ಬಳಗ ನೀನೆ ॥
ಪೆಟ್ಟಿಗೆಯೊಳಗಿನ ಅಷ್ಟಾಭರಣ ನೀನೆ
ಶ್ರೇಷ್ಠಮೂರುತಿ ಕೃಷ್ಣ ನೀನಿರುವ ತನಕ ೧

ಒಡಹುಟ್ಟಿದಣ್ಣ ನೀನೆ, ಒಡಲ ಹೊರೆವನು ನೀನೆ
ಇಡು–ತೊಡುವ ವಸ್ತು ನೀನೆ ॥
ಮಡದಿ ಮಕ್ಕಳನೆಲ್ಲ ಕಡೆಹಾಯ್ಸುವವ ನೀನೆ
ಬಿಡದೆ ಸಲಹುವ ಒಡೆಯ ನೀನಿರುವ ತನಕ ೨

ವಿದ್ಯೆ ಹೇಳುವ ಗುರು ನೀನೆ ಬುದ್ಧಿ ಹೇಳುವ ಧಣಿ ನೀನೆ
ಉದ್ಧಾರಕರ್ತ ನೀನೆ ॥
ಮುದ್ದು ಶ್ರೀ ಪುರಂದರ ವಿಠಲನ ಪಾದದಲಿ
ಬಿದ್ದು ಲೋಲಾಡುತಿರು ಕಾಣು ಮನವೆ ೩

---

* ಈ ಕೀರ್ತನೆ ರಂಗವಿಠಲ ಅಂಕಿತದಲ್ಲೂ ಇದೆ.

## ೨೯೨

ನಾನೇಕೆ ಪರದೇಶಿ ನಾನೇಕೆ ಬಡವನೊ
ಮಾನಾಭಿಮಾನದೊಡೆಯ ವಿಠಲ ಎನಗಿರಲು ಪ

ಮೂರುಲೋಕದ ಒಡೆಯ ಶ್ರೀಹರಿಯು ಎನ್ನ ತಂದೆ
ವಾರಿಜಾಂಬಕಿ ಲಕ್ಷ್ಮೀ ಎನ್ನ ತಾಯಿ ॥
ಮೂರು ಅವತಾರದವರೆನ್ನ ಗುರು ಕಾಣಿರೊ
ಸಾರ ಹೃದಯರು ಎನ್ನ ಬಂಧು ಬಳಗ ೧

ಇಪ್ಪತ್ತುನಾಲ್ಕು ನಾಮಗಳೆಂಬ ಹಣನಾಣ್ಯ
ಒಪ್ಪದಲಿ ಉಣಲುಂಟು ಉಡಲುಂಟು ತೆಗೆದು ॥
ತಪ್ಪದಲೆ ನವಭಕ್ತಿಯೆಂಬ ನವರತ್ನಗಳು
ಮುಪ್ಪು ಇಲ್ಲದ ಭಾಗ್ಯ ಎನಗೆ ಸಿದ್ಧವಿರಲಿಕ್ಕೆ ೨

ಎನಗೆ ಎಂಬವನ ಹೆಸರೇನೆಂಬೆ ಶ್ರೀನಿವಾಸ
ತನಗೆಂದರೆಂದು ಬಗೆವನು ಕಾಣಿರೊ ॥
ಘನಮಹಿಮನಾದ ಸಿರಿ ಪುರಂದರ ವಿಠಲನು
ಅನುಮಾನವಿರದೆನ್ನ ಶಿರದ ಮೇಲಿರಲಿಕ್ಕೆ ೩

## ೨೯೩

ನಾನೇನ ಮಾಡಿದೆನೊ-ರಂಗಯ್ಯ ರಂಗ
ನೀನೆನ್ನ ಕಾಯಬೇಕೋ ಪ

ಮಾನಾಭಿಮಾನವು ನಿನ್ನದು ಎನಗೇನು
ದೀನರಕ್ಷಕ ತಿರುಪತಿ ವೆಂಕಟರಮಣ ಅ.ಪ

ರಕ್ಕಸತನುಜನಲ್ಲೇ ಪ್ರಹ್ಲಾದನು
ಚಿಕ್ಕ ಪ್ರಾಯದ ಧ್ರುವನು ॥
ಸೊಕ್ಕಿನ ಪಾಪ ಮಾಡಿದಜಮಿಳನು ನಿನ್ನ
ಅಕ್ಕನ ಮಗನು ಮಗನು ಏನೋ ರಂಗಯ್ಯ ೧

ಕರಿರಾಜ ಕರೆಸಿದನೇ – ದ್ರೌಪದಿದೇವಿ
ಬರೆದೋಲೆ ಕಳುಹಿದಳೇ ॥
ಕರುಣದಿಂದಲಿ ಋಷಿಪತ್ನಿಯ ಶಾಪವ
ಪರಿಹರಿಸಿದೆಯಲ್ಲವೋ –ರಂಗಯ್ಯ ೨

ಒಪ್ಪಿಡಿಯವಲಕ್ಕಿಯ –ನಿನಗೆ ತಂದು
ಒಪ್ಪಿಸಿದವಗೊಲಿದೆ ॥
ಒಪ್ಪುವೆ ನಿನಗೆ ಶ್ರೀ ಪುರಂದರ ವಿಠಲವ
ರಪ್ಪಂತೆ ಎನ್ನ ಕಾಯೋ –ರಂಗಯ್ಯ ೩

## ೨೯೪

ನಾಮವನೊದಗಿಸಯ್ಯ –ಶ್ರೀಹರಿ ನಿನ್ನ ।
ನಾಮವನೊದಗಿಸಯ್ಯ ಪ

ನಾಮವನೊದಗಿಸಯ್ಯ ನಾನೆಂಬ ಕರ್ತೃತ್ವ ಬಿಡಿಸಿ ।
ಸಾಮಜಪೋಷಕ ನಿನ್ನ ಪಾದಸರಸಿಜಗಳಿಗೆರಗುವೆ ಅ.ಪ

ಮಾತನಾಡುವಾಗ ಮಲಗುವಾಗ ನಡೆಯುವಾಗ ।
ಭೀತಿಗೊಂಡಾಗ ಎಡಹಿಬೀಳುವಾಗ ।
ಸೀತಾರಾಮ ಗೋವಿಂದ ಶ್ರೀ ವೈಕುಂಠಾಧೀಶ ಅ–।
ನಾಥ ಬಾಂಧವ, ಕೃಷ್ಣ, ಕೃಷ್ಣ ಎಂದು ಕರೆವ ೧

ತನು ತಾಳದಂಥ ಕ್ಷುಧೆ ದಾಹವಿಕಾರಗ–।
ಳನುಭವಿಸುತ ಕಂಗೆಡುವಂಥ ಸಮಯದಲ್ಲಿ ॥
ವನಜನಾಭ ಗೋವಿಂದ, ವಾಣೀಪತಿಪಿತ ಕೃಷ್ಣ ।
ದನುಜಮರ್ದನ ಭಕ್ತವತ್ಸಲನೆಂದು ಕರೆವ ೨

ಅಸಹ್ಯವಾದ ಜರೆ ರೋಗಂಗಳಾವರಿಸಿ ।
ಅಸುಗಳು ಕಂಠಗತವಾಗಿ ಧೃತಿತಪ್ಪಿ ॥
ವಿಷಮದೂತನ ಕೈವಶವಪ್ಪ ಸಮಯದಲ್ಲಿ ।
ಬಿಸಜಾಕ್ಷ ಪುರಂದರವಿಠಲನೆಂದು ಕರೆವ ೩

## ೨೯೫

ನಾ ಮಾಡಿದ ಕರ್ಮ ಬಲವಂತವಾದರೆ ।
ನೀ ಮಾಡುವುದೇನೊ ದೇವಾ ಪ

ಸಾಮಾನ್ಯವಲ್ಲವಿದು ಬ್ರಹ್ಮಬರೆದ ಬರೆಹ ।
ನೇಮದಿಂದಲಿ ಎನ್ನ ಹಣೆಯಲ್ಲಿ ಬರೆದುದಕೆ ಅ.ಪ

ಅತಿಥಿಗಳಿಗೆ ಅನ್ನ ಕೊಟ್ಟವನಲ್ಲ ಪರ –।
ಸತಿಯರ ಸಂಗವ ಗಳಿಗೆ ಬಿಟ್ಟವನಲ್ಲ ॥
ಮತಿಹೀನನಾಗಿ ಮರುಳಾಗಿದ್ದೆನೋ ದೇವ ।
ಗತಿ ಯಾವುದೈ ಎನಗೆ ಗರುಡವಾಹನ ಕೃಷ್ಣ ೧

ಅನ್ನಪಾನಂಗಳಿಗೆ ಅಗ್ರಗಣ್ಯನು ಆಗಿ ।
ಸ್ನಾನ ಸಂಧ್ಯಾದಿ ಕರ್ಮಂಗಳ ನೀಗಿ ॥
ದಾನವಾಂತಕ ನಿನ್ನ ಧ್ಯಾನವ ಮಾಡದೆ ।
ಶ್ವಾನನಂತೆ ಮನೆಮನೆ ತಿರುಗುತಲಿದ್ದೆ ೨

ಇನ್ನಾದರು ನಿನ್ನ ದಾಸ ಸಂಗವನಿತ್ತು ।
ಮನ್ನಿಸಿ ದಯಮಾಡೊ ಮನ್ಮಥಜನಕ ॥
ಅನ್ಯರೊಬ್ಬರ ಕಾಣೆ ಆದರಿಸುವರಿಲ್ಲ ।
ಪನ್ನಂಗಶಯನ ಶ್ರೀಪುರಂದರವಿಠಲ ೩

## ೨೯೬

ನಾರಾಯಣ ನಿನ್ನ ನಾಮದ ಸ್ಮರಣೆಯ ।
ಸಾರಾಮೃತವೆನ್ನ ನಾಲಿಗೆಗೆ ಬರಲಿ ಪ

ಕೂಡುವಾಗಲು ನಿಂತಾಡುವಾಗಲು ಮತ್ತೆ ।
ಹಾಡುವಾಗಲು ಹರಿದಾಡುವಾಗ ॥
ಖೋಡಿ ವಿನೋದದಿ ನೋಡದೆ ನಾ ಬಲು ।
ಮಾಡಿದ ಪಾಪ ಬಿಟ್ಟೋಡಿ ಹೋಗುವ ಹಾಗೆ ೧

ಊರಿಗೆ ಹೋಗಲಿ ಊರೊಳಗಿರಲಿ–।
ಕಾರಾಣಾರ್ಥಗಳೆಲ್ಲ ಕಾದಿರಲಿ ॥
ವಾರಿಜನಾಭ ನರ ಸಾರಥಿ ಸನ್ನುತ ।
ಸಾರಿಸಾರಿಗೆ ನಾ ಬೇಸರಿಸದ ಹಾಗೆ ೨

ಹಸಿವು ಇದ್ದಾಗಲಿ ಹಸಿವಿಲ್ಲದಾಗಲಿ ।
ರಸ–ಕಸಿಯಿರಲಿ ಹರುಷವಿರಲಿ ॥
ವಸುದೇವಾತ್ಮಜ ಶಿಶುಪಾಲಕ್ಷಯ ॥
ಅಸುರಾಂತಕ ನಿನ್ನ ಹೆಸರು ಮರೆಯದಂತೆ ३

ಕಷ್ಟದಲ್ಲಿರಲಿ ಉತ್ಕೃಷ್ಟದಲ್ಲಿರಲಿ–।
ಎಷ್ಟಾದರು ಮತಿಗೆಟ್ಟಿರಲಿ ॥
ಕೃಷ್ಣ ಕೃಷ್ಣ ಎಂದು ಶಿಷ್ಟರು ಪೇಳುವ ।
ಅಷ್ಟಾಕ್ಷರ ಮಹಾಮಂತ್ರದ ನಾಮದ ೪

ಕನಸಿನೊಳಾಗಲಿ ಕಳವಳಿಸಾಗಲಿ ।
ಮನಸುಗೊಟ್ಟಿರಲಿ ಮುನಿದಿರಲಿ ॥
ಜನಕಜಾಪತಿ ನಿನ್ನ ಚರಣಕಮಲವನು ।
ಮನಸಿನೊಳಗೆ ಒಮ್ಮೆ ನೆನೆಸಿಕೊಳ್ಳುವ ಹಾಗೆ ೫

ಜ್ವರ ಬಂದಾಗಲು ಚಳಿ ಬಂದಾಗಲು ।
ಮರಳಿ ಮರಳಿ ಮತ್ತೆ ನಡೆವಾಗಲು ॥
ಹರಿನಾರಾಯಣ ದುರಿತ ನಿವಾರಣ ।
ಇರುಳು ಹಗಲು ನಿನ್ನ ಸ್ಮರಣೆ ಮರೆಯದಂತೆ ೬

ಸಂತತ ಹರಿ ನಿನ್ನ ಸಾಸಿರನಾಮವ ।
ಅಂತರಂಗದಾ ಒಳಗಿರಿಸಿ ॥
ಎಂತೋ ಪುರಂದರವಿಠಲರಾಯನೆ ।
ಅಂತ್ಯಕಾಲದಲಿ ಚಿಂತಿಸುವಂತೆ ೭

## ೨೯೭

ನಿನ್ನ ನಂಬಿದೆ ನೀರಜನಯನ
ಎನ್ನ ಪಾಲಿಸೊ ಇಂದಿರೆ ರಮಣ ಪ

ಮುನ್ನ ಪಾಂಚಾಲಿಯ ಮೊರೆಯ ಲಾಲಿಸಿ ಕಾಯ್ದ
ಪನ್ನಗಶಯನ ನೀ ಪರಮಪುರುಷನೆಂದು ಅ.ಪ

ಹರಿಸರ್ವೋತ್ತಮನಹುದೆಂಬ ಬಾಲಕನ
ಹಿರಣ್ಯಕಶಿವು ಪಿಡಿದು ಬಾಧಿಸಲು ॥
ನರಹರಿ ರೂಪಿಂದಲವನ ವಕ್ಷವ ಸೀಳ್ದೆ
ಪರಮ ವಿಶ್ವಾತ್ಮಕನಹುದೆಂದು ಮರೆ ಹೊಕ್ಕೆ ೧

ಪಾದವ ಪಿಡಿದು ನೀರೊಳಗೆಳೆದ ನಕ್ರನ
ಬಾಧೆಗಾರದೆ ಕರಿಮೊರೆಯಿಡಲು ॥
ಆದಿ ಮೂರುತಿ ಚಕ್ರದಿಂದ ನಕ್ರನ ಕೊಂದ
ವೇದಾಂತವೇದ್ಯ ಅನಾಥ ರಕ್ಷಕನೆಂದು ೨

ಇಳೆಗೊಡೆಯನ ತೊಡೆ ನಿನಗೇತಕೆಂದು ಆ
ಲಲನೆ ಕೈ ಪಿಡಿದೆಳೆಯಲರ್ಭಕನ ॥
ನಳಿನಾಕ್ಷ ನಿನ್ನನೆದೆಯೊಳಿಟ್ಟು ತಪವಿರ್ದ
ಬಲು ಬಾಲಕಗೆ ಧ್ರುವಪಟ್ಟಗಟ್ಟಿದನೆಂದು ೩

ಸುದತಿ ಗೌತಮಸತಿ ಮುನಿಶಾಪದಿಂದಲಿ
ಪಥದಿ ಪಾಷಾಣವಾಗಿ ಬಿದ್ದಿರಲು ॥
ಮುದದಿಂದಲಾಕೆಯ ಮುಕ್ತ ಮಾಡಿದ ಯೋಗಿ
ಹೃದಯ ಭೂಷಣ ನಿನ್ನ ಪದವೈಭವವ ಕಂಡು ೪

ಪರಮಪಾವನೆ ಜಗದೇಕಮಾತೆಯನು
ದುರುಳ ರಾವಣ ಪಿಡಿದು ಕೊಂಡೊಯ್ಯಲು ॥
ಶರಣೆಂದು ವಿಭೀಷಣ ಚರಣಕೆರಗಲಾಗಿ
ಸ್ಥಿರಪಟ್ಟವನು ಕೊಟ್ಟ ಜಗದೀಶ ನೀನೆಂದು ೫

ಅಂಬರೀಷನೆಂಬ ನೃಪತಿ ದ್ವಾದಶಿಯನು
ಸಂಭ್ರಮದಿಂದ ಸಾಧಿಸುತಿರಲು ॥
ಡೊಂಬೆಯಿಂದ ದೂರ್ವಾಸ ಶಪಿಸಲಾಗಿ
ಬೆಂಬಿಡದಲೆ ಚಕ್ರದಿಂದ ಕಾಯ್ದವನೆಂದು ೬

ಧರೆಯೊಳು ನಿಮ್ಮ ಮಹಿಮೆಯ ಪೊಗಳ್ವಡೆ
ಸರಸಿಜೋದ್ಭವ-ಶೇಷಗಸದಳವು ॥
ಸ್ಮರಣೆಮಾತ್ರದಿ ಅಜಾಮಿಳಗೆ ಮೋಕ್ಷವನಿತ್ತ
ಪುರಂದರ ವಿಠಲ ಜಗದೀಶ ನೀನೆಂದು ೭

## ೨೯೮

ನಿನ್ನ ನಂಬಿದೆನೊ ನೀಯೆನ್ನ ಸಲಹಯ್ಯ
ಎನ್ನ ಗುಣದೋಷಗಳ ಎಣಿಸಬೇಡಯ್ಯ ಪ

ಬಾಲ್ಯದಲಿ ಕೆಲವು ದಿನ ಬರಿದೆ ಹೋಯಿತು ಹೊತ್ತು
ಮೇಲೆ ಯೌವನಮದದಿ ಮುಂದರಿಯದೆ ॥
ಸ್ಥೂಲ ಸಂಸಾರದಲಿ ಸಿಲುಕಿ ಬಳಲಿದೆ ನಾನು
ಪಾಲಿಸೈ ಪರಮಾತ್ಮ ಭಕುತಿಯನು ಕೊಟ್ಟು ೧

ಆಸೆಯೆಂಬುದು ಅಜನ ಲೋಕ ಮುಟ್ಟುತಲಿದೆ
ಬೇಸರದೆ ಸ್ತ್ರೀಯರಲಿ ಬುದ್ಧಿಯೆನಗೆ ॥
ವಾಸುದೇವನೆ ನಿನ್ನ ಪೂಜೆಗೆಯ್ದವನಲ್ಲ
ಕೇಶವನೆ ಕ್ಲೇಶವನು ನಾಶ ಮಾಡಯ್ಯ ೨

ಈ ತೆರದಿ ಕಾಲವನು ಕಳೆದೆ ನಾನಿಂದಿರೇಶ
ಭೀತಿ ಮೋಹದಿ ಜ್ಞಾನರಹಿತನಾದೆ ॥
ಮಾತೆ ಶಿಶುವನು ಕರೆದು ಮನ್ನಿಸುವ ತೆರನಂತೆ
ದಾತ ಶ್ರೀ ಪುರಂದರ ವಿಠಲ ದಯಮಾಡೈ ೩

## ೨೯೯

ನಿನ್ನನಾಶ್ರಯಿಸುವೆ – ನಿಗಮಗೋಚರ ನಿತ್ಯ
ಬೆನ್ನ ಬಿಡದಲೆ ಕಾಯೊ ಮನದಿಷ್ಟವೀಯೋ ಪ

ಕುಂದಣದ ಆಶ್ರಯವು ನವರತ್ನಗಳಿಗೆಲ್ಲ
ಚಂದಿರನ ಆಶ್ರಯ ಚಕೋರಗಳಿಗೆ ॥
ಕಂದರ್ಪನಾಶ್ರಯ ವಸಂತ ಕಾಲಕ್ಕೆ ಗೋ
ವಿಂದ ನಿನ್ನಾಶ್ರಯವು ಮರಣಕಾಲದೊಳು ೧

ಹಣ್ಣುಳ್ಳ ಮರಗಳು ಪಕ್ಷಿಗಳಿಗಾಶ್ರಯವು
ಪುಣ್ಯನದಿಗಳು ಋಷಿಗಳಿಂಗೆ ಆಶ್ರಯವು ॥
ಕಣ್ಣಿಲ್ಲದಾತನಿಗೆ ಕೈಗೋಲಿನಾಶ್ರಯವು
ಎನ್ನಿಷ್ಟ ಪಡೆಯುವರೆ ನಿನ್ನ ಆಶ್ರಯವು ೨

ಪತಿವ್ರತಾವನಿತೆಗೆ ಪತಿಯೊಂದೆ ಆಶ್ರಯವು
ಯತಿಗಳಿಗನುಶ್ರುತದಿ ಪ್ರಣವದಾಶ್ರಯವು ॥
ಮತಿವಂತನಿಗೆ ಹರಿಸ್ತುತಿಗಳೇ ಆಶ್ರಯವು
ಹಿತವಹುದು ಪುರಂದರವಿಠಲನಾಶ್ರಯವು ೩

## ೩೦೦

ನಿನ್ನ ದಿವ್ಯ ಮೂರುತಿಯ ಕಣ್ಣದಣಿಯಲು ನೋಡಿ
ಧನ್ಯನಾದೆನು ಧರೆಯೊಳು ॥
ಇನ್ನು ಈ ಭವಭಯಕೆ ಅಂಜಲೇತಕೆ ದೇವ
ಚೆನ್ನ ಶ್ರೀ ವೆಂಕಟೇಶಾ ಈಶಾ ಪ

ಏಸು ಜನುಮದ ಸುಕೃತ ಫಲವು ಬಂದೊದಗಿತೋ
ಈ ಸ್ವಾಮಿ ಪುಷ್ಕರಣಿಯೊಳ್
ನಾ ಸ್ನಾನವನು ಮಾಡಿ ವರಾಹ ದೇವರ ನೋಡಿ
ಶ್ರೀ ಸ್ವಾಮಿ ಮಹಾದ್ವಾರಕೆ

ಈ ಶರೀರವನು ಈಡಾಡಿ ಪ್ರದಕ್ಷಿಣೆ ಮಾಡಿ
ಲೇಸಿನಿಂದಲಿ ಪೊಗಳುತ
ಆ ಸುವರ್ಣದ ಗರುಡಗಂಬವನು ಸುತ್ತಿ ಸಂ
ತೋಷದಿಂ ಕೊಂಡಾಡಿದೆ ಬಿಡದೆ ೧

ನೆಟ್ಟನೆಯೆ ದ್ವಾರವ ದಾಟಿ ಪೋಗುತಲಿರಲು
ದಟ್ಟಣೆಯ ಮಹಾಜನದೊಳು
ಕೃಷ್ಣಾಜಿನದವರ ಕೈ ಪೆಟ್ಟು ಕಾಣುತ್ತ ಕಂ
ಗೆಟ್ಟು ಹರಿಹರಿಯೆನುತಲಿ
ಗಟ್ಟಿ ಮನಸಿನಲಿ ತಲೆಚಿಟ್ಟಿಟ್ಟು ಶೀಘ್ರದಲಿ
ಕಟ್ಟಂಜನಕೆ ಪೋಗುತ
ಬೆಟ್ಟದಧಿಪತಿ ನಿನ್ನ ದೃಷ್ಟಿಯಿಂದಲಿ ನೋಡೆ
ಸುಟ್ಟೆ ಎನ್ನಯ ದುರಿತವಾ–ದೇವಾ ೨

ಶಿರದಲಿ ರವಿಕೋಟಿ ತೇಜದಿಂದೆಸೆಯುವ
ಕಿರೀಟ ವರ ಕುಂಡಲಗಳ
ಕೊರಳಲ್ಲಿ ಸರ ವೈಜಯಂತಿ ವನಮಾಲೆಯನು
ಪರಿಪರಿಯ ಹಾರಗಳನು
ಉರದಿ ಶ್ರೀವತ್ಸವನು ಕರದಿ ಶಂಖ–ಚಕ್ರಗಳ
ವರನಾಭಿಮಾಣಿಕವನು
ನಿರುಪ ಮಣಿಖಚಿತ ಕಟಿಸೂತ್ರ ಪೀತಾಂಬರವ
ಚರಣಯುಗದಂದುಗೆಯನು – ಇನ್ನು ೩

ಇಕ್ಷುಚಾಪನ ಪಿತನೆ ಪಕ್ಷೀಂದ್ರವಾಹನನೆ
ಲಕ್ಷ್ಮೀಪತಿ ಕಮಲಾಕ್ಷನೆ
ಅಕ್ಷತ್ರಯ ಅಜ ಸುರೇಂದ್ರಾದಿವಂದಿತನೆ
ಸಾಕ್ಷಾಜ್ಜಗನ್ನಾಥನೇ
ರಾಕ್ಷಸಾಂತಕ ಭಕ್ತವತ್ಸಲ ಕೃಪಾಳು ನಿರ
ಪೇಕ್ಷ ನಿತ್ಯತೃಪ್ತನೇ

ಕುಕ್ಷಿಯೊಳಗಿರೇಳು ಭುವನವನು ಪಾಲಿಪನೆ
ರಕ್ಷಿಸುವುದೊಳಿತು ದಯದಿ ಮುದದಿ ೪

ಉರಗಗಿರಿಯರಸ ನಿನ್ನ ಚರಣ ನೋಡಿದ ಮೇಲೆ
ಉರಗ ಕರಿ ವ್ಯಾಘ್ರ ಸಿಂಹ
ಅರಸು ಚೋರಾಗ್ನಿ ವೃಶ್ಚಿಕ ಕರಡಿ ಮೊದಲಾದ
ಪರಿಪರಿಯ ಭಯಗಳುಂಟೇ
ಪರಮ ವಿಷಯಗಳ ಲಂಪಟದೊಳಗೆ
ಕರುಣಿಸುವುದೊಳಿತು ದಯವಾ
ಸ್ಮರಗಧಿಕ ಲಾವಣ್ಯ ಪುರಂದರ ವಿಠಲನೇ
ಶರಣಜನ ಕರುಣಾರ್ಣವಾ ದೇವಾ ೫

## ೩೦೧

ನಿನ್ನ ಭಕುತಿಯನು ಬೀರೊ ಎನ್ನ
ಮನ್ನಿಸಿ ಸಲಹುವರಾರೋ ಪ

ಸನ್ನುತ ಸನ್ಮಾರ್ಗ ತೋರೋ ಆ
ಪನ್ನರಕ್ಷಕ ಬೇಗ ಬಾರೋ ಅ.ಪ

ಪನ್ನಗಶಯನ ಲಕ್ಷ್ಮೀಶಾ ವೇದ
ಸನ್ನುತ ಪಾದ ಸರ್ವೇಶಾ
ಇನ್ನು ಬಿಡಿಸು ಭವಪಾಶಾ ಪ್ರ
ಸನ್ನ ರಕ್ಷಿಸೊ ಶ್ರೀನಿವಾಸಾ ೧

ನಾರದ ಗಾನವಿಲೋಲಾ ಸ್ವಾಮಿ
ಭೂರಿ ಭಕ್ತರ ಪರಿಪಾಲಾ
ಶ್ರೀ ರಮಣ ಕರುಣಾಲವಾಲ – ದೇವ
ನೀರದಶ್ಯಾಮ ಗೋಪಾಲಾ ೨

ಕರಿರಾಜವರದಪ್ರಮೇಯಾ ಎನ್ನ
ನರಿತು ನಡೆಸೊ ಯೋಗಿಧ್ಯೇಯ ॥
ಸುರಮುನಿ ಹೃದಯ ನಿಕಾಯ ನಮ್ಮ
ಪುರಂದರ ವಿಠಲರಾಯಾ ೩

## ೩೦೨

ನಿಲ್ಲಬೇಕಯ್ಯಾ ನೀನು ಕೃಷ್ಣಯ್ಯಾ
ನಿಲ್ಲಬೇಕಯ್ಯಾ ನೀನು ಪ

ನಿಲ್ಲಬೇಕಯ್ಯಾ ನೀ ಮಲ್ಲಮರ್ದನ ಸಿರಿ
ವಲ್ಲಭ ಎನ್ನ ಹೃದಯದಲಿ ಸತತ ಅ.ಪ

ಸುಪ್ಪಾಣಿ ಮುತ್ತಿಟ್ಟು ನೋಡುವೆ ನಿನ್ನ
ಚಪ್ಪಾಳಿ ತಟ್ಟುತ ನಾ ಪಾಡುವೆ ॥
ಅಪ್ಪ ಶ್ರೀ ಕೃಷ್ಣ ನಿನ್ನನೆತ್ತಿ ಮುದ್ದಿಸಿಕೊಂಬೆ
ಸರ್ಪಶಯನ ಕೃಪೆ ಮಾಡೆಂದು ಬೇಡುವೆ ೧

ಚೆಂದದ ಹಾಸಿಗೆ ಹಾಸುವೆ ಪುನಗು
ಗಂಧ ಕಸ್ತೂರಿಯ ಪೂಸುವೆ ॥
ತಂದು ಮುದದಿ ಮುತ್ತಿನ ಹಾರ ಹಾಕುವೆ
ಅಂದದಿಂದಲಿ ನಿನ್ನನೆತ್ತಿ ಮುದ್ದಿಸಿಕೊಂಬೆ ೨

ನೀಲದ ಕಿರೀಟವನಿಡುವೆ ಬಲು
ಬಾಲಲೀಲೆಗಳನು ಪಾಡುವೆ ॥
ಚೆಲ್ವ ಶ್ರೀ ಪುರಂದರ ವಿಠಲರಾಯನೆ
ನಿಲ್ಲು ಎನ್ನ ಮನದಲಿ ಒಂದೇ ಗಳಿಗೆ ೩

## ೩೦೩

ನೀನಲ್ಲದೆನಗಾರಿಲ್ಲ ಗೋವಿಂದ
ನೀನಲ್ಲದೆ ಇಹಪರವಿಲ್ಲ ಪ

ಪರರ ಬೇಡಿ ಪಂಥವಾಡಿ ಹೋಯಿತಲ್ಲ
ನರರ ಕೊಂಡಾಡಿ ನಾಲಿಗೆ ಬರಡಾಯಿತಲ್ಲ ॥
ಪರವಿಲ್ಲ ಇಹವಿಲ್ಲ ನರಜನ್ಮ ಸ್ಥಿರವಲ್ಲ
ನರಗೆ ಪಾಮರಗೆ ಪಾತಕದ ಪಂಜರಗೆ ೧

ತನುವು ತನ್ನದಲ್ಲ ತನ್ನವರು ತನಗಿಲ್ಲ
ಧನಧಾನ್ಯ ಸಂಪತ್ತು ಅವಗಿರದು ॥
ತನುವು ಹೋಗಿ ಇನ್ನು ಮಣ್ಣು ಕೂಡುವಾಗ
ತನುಮನಕ್ಕೆ ಇನ್ನಾರಯ್ಯ ಸ್ವಾಮಿ ೨

ಮಾತಾಪಿತರು ಗೋತ್ರಜರು ಮೊದಲಾಗಿ
ಪ್ರೀತಿಯಿಂದ ಬಹಳ ಸತಿಸುತರು ॥
ಕೀರ್ತಿಗೆ ಅವರು ಸ್ವಾರ್ಥಕೆ ಇವರು ಸಂ
ಗಾತಿಗಿನ್ನಾರಯ್ಯ ಪುರಂದರ ವಿಠಲ ೩

## ೩೦೪

ನೀನೇ ಅನಾಥ ಬಂಧು, ಕಾರುಣ್ಯ ಸಿಂಧು
ನೀನೇ ಅನಾಥ ಬಂಧು ಪ

ಪತಿಗಳೈವರಿದ್ದರೇನು ಸತಿಯ ಸಮಯಕ್ಕೊದಗಲಿಲ್ಲ ॥
ಗತಿ ನೀನೆಂದು ಮುಕುಂದನೆ ನೆನೆದರೆ
ಅತಿ ಚಮತ್ಕಾರದಿಂದೊದಗಿದೆ ಕೃಷ್ಣ ೧

ಮದಗಜವೆಲ್ಲ ಇದ್ದರೇನು
ಅದರ ಸಮಯಕ್ಕೊದಗಲಿಲ್ಲ ॥
ಮದನನಯ್ಯ ಮಧುಸೂದನನೆಂದರೆ
ಒದಗಿದೆಯೋ ತಡಮಾಡದೆ ಕೃಷ್ಣ ೨

ಶಿಲೆಯ ಕಾಯ ಕುಲಕ್ಕೆ ತಂದೆ
ಬಲಿಯೆನ್ನದೆ ಸತ್ಪದವಿಯನಿತ್ತೆ ॥
ಇಳೆಯೊಳು ನಿನ್ನಯ ದಾಸರ ಸಲಹುವ
ಚೆಲುವ ಮೂರುತಿ ಶ್ರೀ ಪುರಂದರ ವಿಠಲ ೩

## ೩೦೫

ನೀನೆ ಗತಿ ನೀನೆ ಮತಿ ನೀನೆ ಸ್ವಾಮಿ
ನೀನಲ್ಲದನ್ಯತ್ರ ದೈವಗಳ ನಾನರಿಯೆ ಪ

ನಿನ್ನ ಪಾದಾರವಿಂದದ ಸೇವೆಯನು ಮಾಡಿ
ನಿನ್ನ ಧ್ಯಾನದಲಿರುವ ಹಾಗೆ ಮಾಡು ॥
ನಿನ್ನ ದಾಸರ ಸಂಗದಿಂದ ದೂರಿಡದೆನಗೆ
ಸನ್ಮಾರ್ಗವಿಡಿಸೊ ಜಗದೀಶ ಅಘನಾಶ ೧

ಕಮಲನಾಭಿಯೊಳು ಬೊಮ್ಮರ ಪುಟ್ಟಿಸಿದೆ ಹರಿಯೆ
ಕಮಲಸಖ ಕೋಟಿ ಪ್ರಕಾಶ ಈಶ
ಕಮಲಕರ ತಳದಿ ಅಭಯವನಿತ್ತು ಭಕುತರಿಗೆ
ಕಮಲಾಕ್ಷನೆನಿಸಿದೆಯೊ ಕಮಲಾರಮಣನೆ ೨

ಶಿಶುಪಾಲ ದಂತವಕ್ತ್ರರ ಶಿರವ ಭೇದಿಸಿದೆ
ಪಶುಪತಿಯ ಆಭರಣ ವೈರಿವಾಹನನೆ ॥
ಅಸುರಕುಲ ಸಂಹರಿಸಿ ಭಕ್ತಜನರನು ಪೊರೆದೆ
ವಸುಧೇಶ ಸಿರಿ ಪುರಂದರ ವಿಠಲರಾಯಾ ೩

## ೩೦೬

ನೀನೇ ದಯಾಳು ನಿರ್ಮಲಚಿತ್ತ ಗೋವಿಂದ
ನಿಗಮ ಗೋಚರ ಮುಕುಂದ ಪ

ಜ್ಞಾನಿಗಳರಸು ನೀನಲ್ಲದೆ ಜಗಕಿನ್ನು
ಮಾನದಿಂದಲಿ ಕಾವ ದೊರೆಗಳ ನಾ ಕಾಣೆ ಅ.ಪ

ಬಗೆಬಗೆಯಲಿ ನಿನ್ನ ಸ್ತುತಿಪೆನೊ ನಗಧರ
ಖಗಪತಿವಾಹನನೆ ॥
ಮಗುವಿನ ಮಾತೆಂದು ನಗುತ ಕೇಳುತ ನೀನು
ಬೇಗದಿಂದಲಿ ಕಾಯೋ ಸಾಗರಶಯನನೆ ೧

ದಾನವಾಂತಕ ದೀನಜನಮಂದಾರನೆ
ಧ್ಯಾನಿಪರ ಮನದೊಳು ಸಂಚರನೆ ॥
ಮೌನನಾದೆನು ನಿನ್ನ ಧ್ಯಾನಾನಂದದಿ ಈಗ
ಸಾನುರಾಗದಿ ಕಾಯೊ ಸನಕಾದಿ ವಂದ್ಯನೆ ೨

ಮಂದರೋದ್ಧರ ಅರವಿಂದ ಲೋಚನ ನಿನ್ನ ॥
ಕಂದನೆಂದೆನಿಸೊ ಎನ್ನ ॥
ಸಂದೇಹವೇತಕೆ ಸ್ವಾಮಿ ಮುಕುಂದನೆ
ಬಂದೆನ್ನ ಕಾಯೊ ಶ್ರೀ ಪುರಂದರ ವಿಠಲನೆ ೩

## ೩೦೭

ನೀನೆ ದಯಾಸಂಪನ್ನನೊ – ಕಾವೇರಿ ರಂಗ
ನೀನೆ ಬ್ರಹ್ಮಾದಿವಂದ್ಯನೊ ಪ

ಬಂಧುಗಳೆಲ್ಲರ ಮುಂದಾ ದ್ರುಪದನ
ನಂದನೆಯೆಳತಂದು ಸೀರೆಯ ಸೆಳೆಯಲು ॥
ನೊಂದು ಕೃಷ್ಣ ಸಲಹೆಂದರೆ ಅಕ್ಷಯ
ಕುಂದದಲಿತ್ತ ಮುಕುಂದನು ನೀನೇ ೧

ನಿಂದಿತ ಕರ್ಮಗಳೊಂದು ಬಿಡದೆ ಬೇ–
ಕೆಂದು ಮಾಡಿದನಂದಜಮಿಳನು ॥
ಕಂದಗೆ ನಾರಗನೆಂದರೆ ಮುಕುತಿಯ
ಕುಂದದಲಿತ್ತ ಮುಕುಂದನು ನೀನೇ ೨

ಮತ್ತಗಜವ ನೆಗಳೊತ್ತಿ ಪಿಡಿಯೆ ಬಲು
ಒತ್ತಿ ರಭಸದಿ ಬಿತ್ತರಿಸಲು ಗುಣ ॥
ಭೃತ್ಯವರದ ಶ್ರೀ ಪುರಂದರವಿಠಲ
ಹಸ್ತಿಗೊಲಿದ ಪರವಸ್ತುವು ನೀನೇ ೩

## ೩೦೮

ಪರಾಕು ಮಾಡದೆ ಪರಾಮರಿಸಿ ಎನ್ನ –
ಪರಾಧಂಗಳ ಕ್ಷಮಿಸೋ ಪ

ಧರಾರಮಣ ಫಣಿಧರಾಮರಾರ್ಚಿತ
ಸುರಾಧಿಪತಿ ವಿಧಿ ಹರಾದಿ ವಂದಿತ ಅ.ಪ

ನರರೊಳಗೆ ಪಾಮರನು ನಾನಿಹ –
ಪರಕೆ ಸಾಧನವರಿಯೆ ಶ್ರೀಹರಿ ॥
ಚರಣಕಮಲಕೆ ಶರಣುಹೊಕ್ಕೆನು
ಕರುಣದಿಂದ ನಿನ್ನ ಸ್ಮರಣೆಯೆನಗಿತ್ತು ೧

ಜಪವನರಿಯೆನು ತಪವನರಿಯೆನು
ಉಪವಾಸ ವ್ರತಗಳ ನಾನರಿಯೆ ॥
ಕೃಪಾವಲೋಕನದಿಂದ ಆ ಪಾಪಗಳನೆಲ್ಲ
ಅಪಹತವ ಮಾಡೋ ಅಪಾರಮಹಿಮನೇ ೨

ಕರಿರಾಜನುದ್ಧರಿಸಿ ದ್ರೌಪದಿಯ
ಮೊರೆಯ ಲಾಲಿಸಿ ತರಳಗೊಲಿದು ನೀ
ಸಿರಿರಮಣ ನಿನ್ನ ಸರಿಯಾರ ಕಾಣೆ
ಪುರಾರಿನುತ ಸಿರಿ ಪುರಂದರ ವಿಠಲ ೩

## ೩೦೯

ಪುಟ್ಟಿಸಬೇಡವೊ ದೇವ ಎಂದಿಗು ಇಂಥ।
ಕಷ್ಟಪಟ್ಟು ತಿರುಗುವ ಪಾಪಿ ಜೀವನವ ಪ

ನರರ ಸ್ತುತಿಸಿ ನಾಲಗೆ ಬರಡು ಮಾಡಿಕೊಂಡು–
ದರ ಪೋಷಣೆಗಾಗಿ ಅವರಿವರೆನದೆ ॥

ಧರೆಯೊಳು ಲಜ್ಜೆ ಮಾನಗಳೆಲ್ಲವೀಡಾಡಿ ।
ಪರರ ಪೀಡಿಸಿ ತಿಂಬ ಪಾಪಿ ಜೀವನವ ೧

ಎಂಟುಗೇಣು ಶರೀರವ ಒಂದು ಗೇಣು ಮಾಡಿಕೊಂಡು।
ಪಂಟಿಸುತ್ತ ಮೆಲ್ಲಮೆಲ್ಲನೆ ಪೋಗಿ ॥
ಗಂಟಲಸೆರೆಗಳುಬ್ಬಿ ಕೇಳುವ ಸಂಕಟ ವೈ–।
ಕುಂಠಪತಿ ನೀನೆ ಬಲ್ಲೆ ಕಪಟನಾಟಕನೆ ೨

ಲೆಕ್ಕದಲಿ ನೀ ಮೊದಲು ಮಾಡಿದಷ್ಟಲ್ಲದೆ ।
ಸಖ್ಯಕೆ ವೆಗ್ಗಳ ಕೊಡುವರುಂಟೆ ॥
ಕಕ್ಕುಲತೆ ಪಟ್ಟರಿಲ್ಲ ಕರುಣಾಳು ನಿನ್ನ ಮರೆ ।
ಹೊಕ್ಕೆ ಎನ್ನನು ಕಾಯೊ ಪುರಂದರವಿಠಲ ೩

## ೩೧೦

ಪೂರ್ವಜನ್ಮದಲಿ ನಾ ಮಾಡಿದಾ ಭವದಿಂದ
ಉರ್ವಿಯೊಳು ಜನಿಸಿದೆನೊ ಕೃಷ್ಣ ಪ

ಕಾರುಣ್ಯನಿಧಿಯೆನ್ನ ಕಾಯಬೇಕಯ್ಯ ಹರಿ
ವಾರಿಜನಾಭನೇ ಮುದ್ದುಕೃಷ್ಣ ಅ.ಪ

ಹುಟ್ಟಿದಂದಿಂದಿಗೂ ಸುಖವ ನಾ ಕಾಣದಲೆ
ಕಷ್ಟನಾದೆನು ಕೇಳೊ ಕೃಷ್ಣ
ತೊಟ್ಟಿಲಿನ ಶಿಶು ತಾಯ ಬಿಟ್ಟ ತೆರನಂತೆ ಕಂ
ಗೆಟ್ಟು ಸೊರಗಿದೆನಯ್ಯ ಕೃಷ್ಣ
ಮುಟ್ಟಲಮ್ಮರು ಎನ್ನ ಸತಿ ಸುತರು ಬಾಂಧವರು
ಅಟ್ಟಿ ಎಳೆಯುತ್ತಿಹರೋ ಕೃಷ್ಣ
ಕಷ್ಟ ದಾರಿದ್ರ್ಯವನು ಪರಿಹರಿಸದಿರೆ ದೂರು
ಮುಟ್ಟುವುದು ನಿನಗಯ್ಯ ಕೃಷ್ಣ ೧

ಕಾಶಿಯಾ ವಾಸವನು ಬಯಸಿ ಬಹುದಿನದಿಂದ
ಆಸೆಯೊಳಗಿದ್ದೆನಯ್ಯ ಕೃಷ್ಣ
ಗಾಸಿಯನು ಮಾಡದಲೆ ದೋಷವನು ಪರಿಹರಿಸೊ
ಸಾಸಿರನಾಮದ ಕೃಷ್ಣ
ಹೇಸಿಕೆಯೊಳಿರ್ದ ಸಂಸಾರವೆಂಬುವ ಮಾಯ
ಪಾಶದಿಂದಲಿ ಬಿಗಿದರೇ ಕೃಷ್ಣ
ಕಂಸಮರ್ದನನೆ ನೀ ಕಾಯಬೇಕಯ್ಯ ಹರಿ
ವಾಸುದೇವನೆ ಮುದ್ದು ಕೃಷ್ಣ ೨

ಲೋಕದೊಳಗೆನ್ನನು ಪೋಲ್ವ ಪಾಪಿಗಳನ್ನು
ನೀ ಕಂಡು ಬಲ್ಲೆಯಾ ಕೃಷ್ಣ
ಸಾಕಿನ್ನು ಎನಗೊಂದು ಗತಿಯ ತೋರಿಸಿ ಸದ್ವಿ
ವೇಕಿಯನೆ ಮಾಡಯ್ಯ ಕೃಷ್ಣ
ರಾಕೇಂದುಮುಖಿ ದ್ರೌಪದಿಯ ಮಾನವ ಕಾಯ್ದೆ
ಆಕೆಗಕ್ಷಯವಿತ್ತೆ ಕೃಷ್ಣ ಪಿ –
ನಾಕಿ ಸಖ ಪುರಂದರ ವಿಠಲನೆ ಉಡುಪಿಯ ವಾಸ
ಸಾಕಿ ಸಲಹೈ ಎನ್ನ ಕೃಷ್ಣ *

## ೩೧೧

ಬದುಕಿದೆನು ಬದುಕಿದೆನು ಭವದುರಿತ ಹಿಂಗಿತು
ಪದುಮನಾಭನ ಪಾದದೊಲಿಮೆ ಎನಗಾಯಿತು ಪ

ಹರಿಯ ತೀರ್ಥ ಪ್ರಸಾದವು ಎನಗೆ ದೊರಕಿತು ।
ಹರಿಕಥಾಮೃತವೆನ್ನ ಕಿವಿಗೊದಗಿತು ॥
ಹರಿದಾಸರುಗಳೆನ್ನ ಬಂಧುಬಳಗವಾದರು ।
ಹರಿಯ ಶ್ರೀ ಮುದ್ರೆಯೆನಗೆ ಆಭರಣವಾಯ್ತು ೧

* ಈ ಕೀರ್ತನೆ ಕನಕದಾಸರ ಅಂಕಿತದಲ್ಲೂ ದೊರೆಯುತ್ತದೆ.

ಮುಕ್ತರಾದರು ಎನ್ನ ನೂರೊಂದು ಕುಲದವರು ।
ಮುಕ್ತಿ ಮಾರ್ಗಕೆ ಯೋಗ್ಯ ನಾನಾದೆನು ॥
ಸುಕೃತಿ ದೇಹಕ್ಕೆನ್ನ ಮನವು ತಾನೆಳಸಿತ್ತು ।
ಅಕಳಂಕ ಹರಿನಾಮ ದಿವ್ಯಕೊದಗಿತ್ತು ೨

ಇಂದೆನ್ನ ಸಂತತಿಗೆ ಸಕಲ ಸಂಪದವಾಯ್ತು ।
ಮುಂದೆನ್ನ ಜನ್ಮ ಸಾಫಲ್ಯವಾಯ್ತು ॥
ತಂದೆ ಶ್ರೀ ಹರಿ ಪುರಂದರವಿಠಲ ರಾಯನೇ ।
ಬಂದೆನ್ನ ಹೃದಯದೊಳು ನೆಲೆಯಾಗಿ ನಿಂತ * ೩

## ೩೧೨

ಬಂದೆಯಾ ಪರಿಣಾಮದಿ ನಿನ್ನ
ಬಂಧು ಬಳಗವನೆಲ್ಲ ಬಿಟ್ಟು ಸನ್ಮಾರ್ಗದಿ ಪ

ಸಂಚಿತ ಪ್ರಾರಬ್ಧ ಕರ್ಮಂಗಳನೆಲ್ಲ
ಕಿಂಚಿತು ಮಾಡಿ ಸಂಕೋಲೆಯ ಹಾಕಿ ॥
ಮಿಂಚುವ ಧನ ಪುತ್ರ ದಾರೇಷಣಂಗಳ
ವಂಚಿಸಿ ಕವಲುದಾರಿಯ ಬಿಟ್ಟು ಮಾರ್ಗದಿ ೧

ಕಾಮವ ಖಂಡಿಸಿ ದ್ರೋಹವ ದಂಡಿಸಿ
ನಾಮರೂಪ ಕರ್ಮಂಗಳ ನಿಂದಿಸಿ ॥
ತಾಮಸ ಕರ್ಮ ನಡತೆಯ ತಗ್ಗಿಸಿ ನಿರ್
ನಾಮ ಮಾಡಿ ಮದ–ಮತ್ಸರಂಗಳ ನೀಗಿ ೨

ಅಷ್ಟಭೋಗಂಗಳ ನಷ್ಟಂಗಳ ಮಾಡಿ
ಅಷ್ಟೈಶ್ವರ್ಯವ ಮಟ್ಟು ಮಾಡಿ ॥
ಅಷ್ಟ ಪ್ರಕೃತಿಗಳ ಕುಟ್ಟಿ ಕೆಡಹಿ ಬಹಳ
ನಷ್ಟತುಷ್ಟಿಗಳಲ್ಲಿ ದೃಷ್ಟಿಯೇ ನಿಲ್ಲದೆ ೩

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ಸ್ಥೂಲ ಸೂಕ್ಷ್ಮ ಕಾರಣ ದೇಹಂಗಳನೆಲ್ಲ
ಬೀಳುಗೆಡಹಿ ಪಂಚಭೂತಂಗಳ ॥
ಪಾಳು ಮಾಡಿ ಪಂಚ ಪಂಚ ಇಂದ್ರಿಯಗಳ
ಕೋಳಕೆ ತಗುಲಿಸಿ ಕೊನಬುಗಾರನಾಗಿ ೪

ಹೊಳೆವ ಪ್ರಪಂಚದ ಬಲೆಯ ಬೀಸಿ ಸಂಗ
-ಡಲೆ ಸಾಗಿ ಬರುತಿಹ ದಾರಿಯೊಳು ॥
ಒಲಿದು ಮುಕ್ತಿಯನೀವ ಪುರಂದರವಿಠಲನು
ಬಲವನಿತ್ತುದರಿಂದೆ ನಾನು ನೀನೆನ್ನದೆ ೫

## ೩೧೩

ಬರಬೇಕೋ ರಂಗಯ್ಯ ನೀ – ಬರಬೇಕೊ ಪ

ಬರಬೇಕೊ ಬಂದು ಒದಗಬೇಕೊ ಮಮಗುರು ।
ನರಹರಿ ನಾರಾಯಣ ನೀನಾ ಸಮಯಕೆ ಅ.ಪ

ಕಂಠಕೆ ಪ್ರಾಣ ಬಂದಾಗ ಎನ್ನ ।
ನಂಟರಿಷ್ಟರು ಬಂದಳುವಾಗ ॥
ಗಂಟು ಹುಟ್ಟಿನ ಕಾಲಬಂಟರು ಕವಿದೆನ್ನ ।
ಗಂಟಲೌಕುವಾಗ ವೈಕುಂಠನಾರಾಯಣ ೧

ನಾರಿಯು ಪುತ್ರ ಮಿತ್ರರು ಬಂಧುಗಳು ।
ಆರೆನ್ನ ಸಂಗಡ ಬಾರರು ॥
ಆರಿಗಾರಿಲ್ಲ ಯಮನಾರುಭಟಕೆ ಅಸು–।
ರಾರಿ ಮೈಮರೆದಾಗ ನೀರೇರುಹನಾಭ ೨

ಕರಿ ಪ್ರಹ್ಲಾದಾದಿ ಭಕ್ತರ ಪತಿ ।
ಕರಿಸಲು ಒದಗಿದೆ ಶ್ರೀಧರ ॥
ನೆರೆ ಹೀನನೆನ್ನ ಉದ್ಧರಿಸಿ ಅಚ್ಯುತ ನಿನ್ನ ।
ಚರಣದೊಳಿಂಬಿಡೊ ಪುರಂದರವಿಠಲ ೩

## ೩೧೪

ಬರಿದೆ ಹೋಯಿತು ಹೊತ್ತು – ಹರಿಯೆ ।
ಶರೀರವೆ ಸ್ಥಿರವೆಂದು ಮರೆತು ನಾನಿದ್ದೆನೊ ಪ

ಆಸೆಯೆಂಬುದು ಎನ್ನ ಕ್ಲೇಶಪಡಿಸುತಿದೆ ।
ಗಾಸಿಯಾದೆನೊ ಹರಿಯೆ ॥
ಶೇಷಶಯನನು ನೀನು ನಿನ್ನ ನಂಬಿದೆ ನಾನು ।
ನಾಶವಾಯಿತು ದಿನ ಮೋಸ ಹೋದೆನಯ್ಯ ೧

ಸತಿಸುತರೆಂದೆಂಬ ಅತಿ ಭ್ರಾಂತಿಗೊಳಗಾದೆ ।
ಮತಿಹೀನ ನಾನಾದೆನೊ ॥
ಸತತ ನಿರಂತರ ಜಡದೇಹ ನಾನಾದೆ ।
ರತಿಗೆಳೆಯುತಿದೆ ಮನಸು ಹರಿಸರ್ವೋತ್ತಮನೆ ೨

ಪರರ ಸೇವೆಯ ಮಾಡಿ ಪರರನೆ ಕೊಂಡಾಡಿ ।
ಮರೆತೆನೊ ನಿನ್ನ ಧ್ಯಾನ ।
ಕರುಣದಿಂದಲಿ ಎನ್ನ ಕಾಯ್ದು ನೀ ಸಲಹಯ್ಯ ।
ಪುರಂದರ ವಿಠಲ ನಿನ್ನನೆ ನಂಬಿದೆ ನಾನು ೩

## ೩೧೫

ಬಾರೋ ನೀ ಎನ್ನ ಮನಮಂದಿರಕೆ ತಡಮಾಡುವುದೇಕೆ ।
ಮಾರಜನಕ ಹರಿ ನಿನ್ನಗ್ಗಳಿಕೆ ಸ್ಮರಿಸುವೆ ಕ್ಷಣಕ್ಷಣಕೆ ಪ

ಬಾರೋ ಬಾರೋ ಮಧುರಾಪುರಿ ಬಿಟ್ಟು
ಸೇರಿಕೊಳ್ಳದಿರು ವರಕರಿಪುರವ ಅ.ಪ

ಕುಂತೀಮಕ್ಕಳ ಮನೆಗೆ ಹೋದೇನೆಂದಿ, ಅವರೈದು ಮಂದಿ
ಸಂತೋಷ ಪಡಿಸುವರೆಂದು ತಿಳಿದಿ ಎಂಜಲ ಬಳಿದಿ ॥
ಕಂತುಪಿತ ಕೇಳೊ ಮುಂದೆ ನೀ ಮುದದಿ ಬಂಡಿಯ ಹೊಡೆದಿ

ಇಂತು ಪರಿಯ ನಾನೆಂತು ಪೇಳಲೊ
ಕಾಂತ ಎನ್ನ ಮನದಂತರ್ಯಾಮಿ ೧

ಗೋಕುಲದಲ್ಲಿರೆ ನಂದಗೋಪ ನಿನ್ನ ಕೈಯಿಂದ
ಆಕಳ ಕಾಯ್ಸುವನು ಅವ ಪಾಪ ಅದು ಅಲ್ಲದಲೆ ॥
ನೀ ಕೇಳ್ವೆ ಗೋಪಿಯರ ಅಪಲಾಪ ಲಾಲಿಸು ನೀ ಭೂಪ
ಈ ಕರೆಕರೆಯೊಳು ನೀ ಕೂಡಿರುವುದು
ಏಕೆಲೊ ಕಾಂತನೆ ಮಮ ಹೃತ್ಕಮಲಕೆ ೨

ದುಷ್ಟ ಮಾವನ ಮನೆಗೆ ಹೋಗಲು ಬೇಡ ಪಟ್ಟದಾನೆಗಳಿಂದ
ಗಟ್ಟಿಯಾಗಿ ಮೇಲ್ತುಳಿಸುವನವ ಮೂಢ ಮಲ್ಲರ ಕೈಯಿಂದ ॥
ಕುಟ್ಟಿ ಕೆಡಹುವನು ಪ್ರಚಂಡ ತಿಳುಹಿದೆನುದ್ದಂಡ
ಇಷ್ಟು ಪರಿಯಲಿ ಕಷ್ಟವೇತಕೆಲೊ
ದಿಟ್ಟ ಪುರಂದರವಿಠಲ ಕೃಷ್ಣ ೩

## ೩೧೬

ಬಾಯ್ಬಡಿಕರಿಂದ ನಾನು ಬದುಕಿದೆನು ಅವರು ।
ಮಾಡಿದುಪಕಾರವ ಮರೆಯೆ ಶ್ರೀ ಹರಿಯೆ ಪ

ಹಂಗಿಸಿ ಹಂಗಿಸಿ ಮನವ ಹರಿಯಲಿ ನಿಲಿಸಿದರು ।
ಭಂಗಿಸಿ ಭಂಗಿಸಿ ಬಯಲಾಸೆ ಕೆಡಿಸಿದರು ॥
ಕಂಗೆಡಿಸಿ ಕಂಗೆಡಿಸಿ ಕಾಮ ಕ್ರೋಧ ಬಿಡಿಸಿದರು ।
ಹಂಗಿಸಿದವರೆನ್ನ ಪರಮಬಂಧುಗಳು ೧

ಜಾಡಿಸಿ ಜಾಡಿಸಿ ಎನ್ನ ಜನ್ಮಗಳ ಕಳೆದರು ।
ಹೂಡಿಸಿ ಹೂಡಿಸಿ ಹುಟ್ಟು ಹೊಂದುಗೊಳಿಸಿದರು ॥
ಪೀಡಿಸಿ ಪೀಡಿಸಿ ಎನ್ನ ಪ್ರಯತ್ನವ ಕಳೆದರು ।
ಕಾಡಿ ಕಾಡಿ ಕೈವಲ್ಯಪದವಿ ತೋರಿದರು ೨

ಕಾಸು ಮುಟ್ಟಿದಾಗ ಕಾಯ ಪ್ರಾಯಶ್ಚಿತ್ತಕಿಕ್ಕಿದರು ।
ದೂಷಿಸಿ ದೂಷಿಸಿ ನಿರ್ದೋಷ ಮಾಡಿದರು ॥
ಲೇಸನು ಕೊಡು ನಮ್ಮ ಪುರಂದರ ವಿಠಲನೆ ॥
ದಾಸನೆಂದೆನಿಸುವರನುದಿನದಲಿ ಎನ್ನ ೩

## ೩೧೭

ಬಿಡೆ ನಿನ್ನ ಪಾದವ ಬಿಂಕವಿದೇಕೋ
ಕೊಡುವುದೊ ಅಭೀಷ್ಟವ ಕೋಪವಿದೇಕೋ ಪ

ನೀರೊಳು ಪೊಕ್ಕರು ನಿನ್ನನು ಬಿಡೆ ಬೆನ್ನ
ಭಾರವ ಪೊತ್ತಿಹೆನೆಂದರು ಬಿಡೆನೋ ॥
ಕೋರೆಯ ತೋರಿಸಿ ಕೊಸರಿಕೊಂಡರು ಬಿಡೆ
ಘೋರ ರೂಪವ ತೋರಿ ಘುಡುಘುಡಿಸಲು ಬಿಡೆ ೧

ತಿರುಕನೆಂದರು ಬಿಡೆ ತರಿದ ತಾಯ್ದೊರಳ
ಕೊರೆಕನೆಂದರು ಬಿಡೆ ಅವನಿಯೊಳು ॥
ಕರಕರೆಗಾರದೆ ಕಾಡ ಸೇರಲು ಬಿಡೆ
ಗರಳ ಮಡುವಿನಲ್ಲಿ ಧುಮುಕಿದರೂ ಬಿಡೆ ೨

ಕಡು ಬತ್ತಲೆ ಕೈಲಿ ಕಾಸಿಲ್ಲೆಂದರು ಬಿಡೆ
ಒಡನೆ ತೇಜಿಯನೇರಿ ಓಡಲು ಬಿಡೆನೋ ॥
ಒಡೆಯ ಪುರಂದರ ವಿಠಲನೇ ಎನ್ನ
ಕಡಹಾಯ್ಸುವ ಭಾರ ಕರ್ತನು ನೀನೆಂದು ೩

## ೩೧೮

ಬಿನ್ನಹಕೆ ಬಾಯಿಲ್ಲ ಎನಗೆ ಅದರಿಂದ ।
ನಿನ್ನ ಮರೆದೆನೊ ಸ್ವಾಮಿ ಎನ್ನ ಕಾಯಯ್ಯ ಪ

ಅನ್ನಮದ ಅರ್ಥಮದ ಅಖಿಳ ವೈಭವದ ಮದ ।
ಮುನ್ನ ಪ್ರಾಯದ ಮದವು ರೂಪ ಮದವು ॥

ತನ್ನ ಸತ್ವದ ಮದ ಧರಿತ್ರಿ ವಶವಾದ ಮದ ।
ಇನ್ನು ಎನಗಿದಿರಿಲ್ಲವೆಂಬ ಮದದಿ ೧

ಶಶಿವದನೆಯರ ಮೋಹ ಜನನಿ – ಜನಕರ ಮೋಹ ।
ರಸಿಕ ಭ್ರಾಂತಿಯ ಮೋಹ ರಾಜಮನ್ನಣೆ ಮೋಹ ॥
ಪಶು ಮೋಹ ಶಿಶುಮೋಹ ಬಂಧುವರ್ಗದ ಮೋಹ ।
ಹಸನುಳ್ಳ ವಸ್ತ್ರ ಆಭರಣಗಳ ಮದದಿ ೨

ಇಷ್ಟು ದೊರಕಿದರೆ ಮತ್ತಿಷ್ಟು ಬೇಕೆಂಬಾಸೆ ।
ಅಷ್ಟು ದೊರಕಿದರೆ ಮತ್ತಷ್ಟರಾಸೆ ॥
ಕಷ್ಟ ಜೀವನದಾಸೆ ಕಾಣಾಚಿ ಕೊಂಬಾಸೆ
ನಷ್ಟ ಜೀವನ ಬಿಡಿಸೊ ಪುರಂದರ ವಿಠಲ ೩

## ೩೧೯

ಭಂಡನಾದೆನು ನಾನು ಸಂಸಾರದಿ ।
ಕಂಡು ಕಾಣದ ಹಾಗೆ ಇರಬಹುದೆ ನರಹರಿಯೆ ಪ

ಕಂಡ ಕಲ್ಲುಗಳಿಂಗೆ ಕೈಮುಗಿದು ಸಾಕಾದೆ ।
ದಿಂಡೆಗಾರರ ಮನೆಗೆ ಬಲು ತಿರುಗಿದೆ ॥
ಶುಂಡಾಲನಂತೆನ್ನ ಮತಿ ಮಂದವಾಯಿತ್ತೈ ।
ಪುಂಡರೀಕಾಕ್ಷ ನೀ ಕರುಣಿಸೈ ಬೇಗ ೧

ನಾನಾವ್ರತಂಗಳನು ನಾ ಮಾಡಿ ಬಳಲಿದೆನು ।
ಏನಾದರೂ ಎನಗೆ ಫಲವಿಲ್ಲವು ॥
ಆ ನಾಡು ಈ ನಾಡು ಸುತ್ತಿ ನಾ ಮರುಳಾದೆ ।
ನೀನಾದರೂ ಕೃಪೆಯನಿಡು ಬೇಗ ಹರಿಯೇ ೨

ಬುದ್ಧಿಹೀನರ ಮಾತ ಕೇಳಿ ನಾ ಮರುಳಾದೆ ।
ಶುದ್ಧಿ ಇಲ್ಲದೆ ಮನವು ಕೆಟ್ಟು ಹೋಯ್ತು ॥
ಮಧ್ವನುತ ಸಿರಿ ಪುರಂದರವಿಠಲ ತತ್ವದ ।
ಸಿದ್ಧಿಯನು ದಯೆಗೆಯ್ದು ಉಳುಹು ನೀ ಎನ್ನ ೩

## ೩೨೦

ಮಂತ್ರ ದೊರಕಿತು ನಾಮ ಮಂತ್ರ ದೊರಕಿತು ।
ಯಂತ್ರವಾಹಕ ನಾರಾಯಣನ ಪ

ಅಂತರಂಗದಿ ಜಪಿಸುವಂಥ ಅ.ಪ

ಆಶೆಯಲ್ಲಿ ಬೀಳಲಿಲ್ಲ ಕ್ಲೇಶಪಟ್ಟು ಬಳಲಲಿಲ್ಲ ।
ವಾಸುದೇವ ಕೃಷ್ಣನೆಂಬ ಶಾಶ್ವತದೀ ದಿವ್ಯ ನಾಮ ೧

ಅರ್ಥ ವೆಚ್ಚವಾಗಲಿಲ್ಲ, ಕಷ್ಟಪಟ್ಟು ಬಳಲಲಿಲ್ಲ ।
ಭಕ್ತಿಯಿಂದ ಭಜಿಸಿ ಮಹಾಮುಕ್ತಿ ಪದವಸೇರುವಂಥ ೨

ಹೊದ್ದಿದ ಪಾಪವೆಲ್ಲ ಕಳೆದು, ಉದ್ಧಾರವಾಯಿತು –
ಕುಲಕೋಟಿಯು ।
ಮುದ್ದು ಕೃಷ್ಣನ ದಿವ್ಯನಾಮ ವಜ್ರಕವಚ ಹೃದಯದಲ್ಲಿ ೩

ಹಾಸಬಹುದು ಹೊದೆಯಬಹುದು, ಸೂಸಿ
ಒಡಲ ತುಂಬಬಹುದು ।
ದಾಸರನ್ನು ಬಿಡದೆ ಪೊರೆವ ಶ್ರೀಶನೆಂಬ ದಿವ್ಯ ನಾಮ ೪

ಒಂದು ಬಾರಿ ಸ್ತುತಿಸಿದರೆ ಒಂದು ಕೋಟಿ ಜಪದಫಲವು ।
ಇಂದಿರೇಶ ಶ್ರೀ ಪುರಂದರ ವಿಠಲನೆಂಬ ದಿವ್ಯನಾಮ ೫

## ೩೨೧

ಮಂದಮತಿಯೈ ನಾನು ಮದನಜನಕನು ನೀನು
ಕುಂದುಗಳನೆಣಿಸದಲೆ ದಯಮಾಡಿ ಸಲಹೋ ಪ

ಪಾಪಕರ್ತನು ನಾನು ಪಾಪನಾಶಕ ನೀನು
ಕೋಪ ಮದ ಮತ್ಸರದಿ ಸುಳಿವೆ ನಾನು ॥

ತಾಪವನು ತರಿದು ನಿರ್ಭಯವ ಮಾಡುವೆ ನೀನು
ರೂಪಛಾಯಕೆ ಮರುಳುಗೊಂಬೆನ್ನೈ ನಾನು ೧

ಶರಣ ಶಿಕ್ಷಕ ನೀನು ಪರಮ ಪಾತಕಿ ನಾನು
ದುರಿತ ಪರ್ವತವ ಪರಿಹರಿಪೆ ನೀನು ॥
ಮರುಳುಗೊಂಬನು ನಾನು ಅರಿತು ರಕ್ಷಿಪೆ ನೀನು
ಗುರುವಮತಿಯೈ ನಾನಗಮ್ಯ ನೀನು ೨

ಮಂದಭಾಗ್ಯನು ನಾನು ಇಂದಿರಾಪತಿ ನೀನು
ಹಿಂದು ಮುಂದಿನ ಸುದ್ದಿ ಅರಿಯದವ ನಾನು ॥
ತಂದೆ ಶ್ರೀ ಪುರಂದರವಿಠಲ ರಾಯನೆ ದೇವ
ಎಂದೆಂದು ಭಕ್ತರನು ಸಲಹುವೆಯೋ ನೀನು ೩

## ೩೨೨

ಮನವೆನ್ನ ಮಾತ ಕೇಳದು – ಮಂದಜ್ಞಾನದಿ ।
ತನುವಿನಾಸೆಯ ಬಿಡಲೊಲ್ಲದು ಪ

ವನಜನಾಭನೆ ನಿನ್ನ ನಾಮ ಸಾಸಿರವ ।
ನೆನೆಯದೆ ಕಂಡಕಡೆಗೆ ಎರಗುತಲಿದೆ ಅ.ಪ

ದೇಹ ಸಂಬಂಧಿಗಳಾದವರ್ಯೆವರು ।
ಮೋಹಪಾಶದಿ ಕಟ್ಟಿ ಬಿಗಿದಿಹರೈ ॥
ಕಾಯ ಅನಿತ್ಯವೆಂಬುದನರಿಯದೆ ।
ಮಾಯಾ ಪ್ರಪಂಚದಿಂದಲಿ ಬದ್ಧನಾಗಿಹೆ ೧

ಸಾಧುಸಜ್ಜನರ ಸಂಗವ ಮಾಡಿ ಪರಗತಿ–।
ಗಾಧಾರವನು ಮಾಡಲೊಲ್ಲದಯ್ಯ ॥
ಕ್ರೋಧ ಕುಹಕ ದುಷ್ಟರೊಡನಾಡಿ ಕಾಲನ ।
ಬಾಧೆಗೆ ಒಳಗಾಗುವಂತೆ ಮಾಡುತಲಿದೆ ೨

ಮದಗಜ ಮೈಯ ಮರೆತು ಮುಂದುಗಾಣದೆ ।
ಕದುವಿನೊಳಗೆ ಬಿದ್ದಂತಾದೆನಯ್ಯ ॥

ಇಂದಿರೆಯರಸ ನೀನಲ್ಲವೆ ಬಹು ಸೌಂದರ್ಯನಿಧಿ ನೀನಲ್ಲವೆ?
ಮಂದಮತಿ ನಾನಾದಡೇನು ಕೃಪಾ
ಸಿಂಧು ನೀ ರಕ್ಷಿಸಬಾರದೆ ರಂಗ ೨

ದೋಷಿಯು ನಾನಾದಡೇನಯ್ಯ ಸರ್ವ ದೋಷರಹಿತ ನೀನಲ್ಲವೆ?
ಗಾಸಿಯೇತಕೆ ನಿನ್ನ ನಂಬಿದೆ ಸಲಹಯ್ಯ
ಶೇಷಶಾಯಿ ಶ್ರೀ ಪುರಂದರ ವಿಠಲ ೩

## ೩೨೯

ಯಾರಲಿ ದೂರುವೆನೋ ಗಿರಿಯ ರಾಯಾ
ಯಾರೆನ್ನ ಸಲಹುವರೋ ಪ

ಸಾರಿದ ಭಕ್ತಸಂಸಾರಿ ನಿನ್ನಯ ಪದ
ವಾರಿಜವನು ತೋರೋ ಕಾರುಣ್ಯ ನಿಧಿ ಬೇಗ ಅ.ಪ

ಕಷ್ಟಜನ್ಮಕೆ ಬಂದೆನೋ–ಧಾರಿಣಿಯೊಳು
ದುಷ್ಟರಿಂದಲಿ ನೊಂದೆನೋ ॥
ನಿಷ್ಠುರ ಬೇಡವೊ ನಿನ್ನ ನಂಬಿದ ಮೇಲೆ
ಸೃಷ್ಟಿಗೊಡೆಯ ಎನ್ನ ಬಿಟ್ಟು ಕಳೆಯಬೇಡ ೧

ಹಿಂದೆ ಮಾಡಿದ ಕರ್ಮವು ಈ ಭವದೊಳು
ಮುಂದಾಗಿ ತೋರುತಿದೆ ॥
ಇಂದೇನು ಗತಿ ಅದರಿಂದ ನೊಂದೆನು ನಾನು
ಮಂದರಧರ ಗೋವಿಂದ ನೀನಲ್ಲದೆ ೨

ಹಗಲು ಕತ್ತಲೆ ಸುತ್ತಿದೆ ಕಂಗೆಡಿಸುತ
ಹಗೆಗಳ ನಗಿಸುತಿದೆ ॥
ಉಗುರಲಿ ಸೀಗೆ ಮುಳ್ಳುಗಳೀಗ ನೆಡುತಿವೆ
ಸೊಗವ ಹಾರಿಸಿ ಎದೆ ದಿಗಿಲುಗೊಳಿಸುತಿದೆ ೩

ಬಾಡಿದರಳಿಸಸಿಯ ಕಲ್ಲಿನ ಮೇಲೆ
ಈಡಾಗಿ ನಾಟಿದರೆ ॥

ಬೇಡಿಕೊಂಡರೆ ತಳಿರು ಮೂಡಿ ಬರುವುದುಂಟೆ
ರೂಢಿಗೊಡೆಯ ನೀನು ನೋಡದಿದ್ದ ಮೇಲೆ ೪

ಹಲವು ಪರಿಯ ಕಷ್ಟವ ನಿನ್ನಯ ಪಾದ
ಜಲಜದ ಕರುಣದಲಿ ॥
ಸುಲಿಗೆಗೊಟ್ಟೆನು ನಾನು ಸೂರೆಗಾರರಿಗೆಲ್ಲ
ಒಲವಾಗು ಎನ್ನೊಳು ಪುರಂದರವಿಠಲ ೫

## ೩೩೦

ರಂಗಾ ಬಾರೋ ಪಾಂಡುರಂಗ ಬಾರೋ ಶ್ರೀ
ರಂಗಾ ಬಾರೋ ನರಸಿಂಗ ಬಾರೋ ಪ

ಕಂದ ಬಾರೋ ಎನ್ನ ತಂದೆ ಬಾರೋ
ಇಂದಿರಾ ರಮಣ ಮುಕುಂದ ಬಾರೋ ೧

ಅಪ್ಪ ಬಾರೋ ತಿಮ್ಮಪ್ಪ ಬಾರೋ ಕಂ
ದರ್ಪನೈಯನೇ ಕಂಚಿವರದ ಬಾರೋ ೨

ವಿಷ್ಣು ಬಾರೋ ಉಡುಪಿ ಕೃಷ್ಣ ಬಾರೋ ಎ
ನ್ನಿಷ್ಟ ಮೂರುತಿ ಪುರಂದರ ವಿಠಲ ಬಾರೋ ೩

## ೩೩೧

ರಂಗ ರಂಗ ಎಂಬ ನಾಮವ ನೆನೆವರ ।
ಸಂಗದೊಳಿರಿಸು ಎನ್ನ ಪ

ಅಂಗದೊಳೈವರು ದೆಸೆದಸೆಗೆಳೆಯುವ ।
ಭಂಗವ ಬಿಡಿಸೊ ಹರಿಯೆ–ಸ್ವಾಮಿ ಅ.ಪ

ಪರೆಕೃಷ್ಣ ಎಂದೆಂಬ ಜಿಹ್ವೆ ತಾನಿರುತಿರೆ ।
ಬರಿದೆ ಮಾತಾಡುವೆ ನಾ ॥
ಗುರು ಹಿರಿಯರ ವಂದನೆಗೆ ಕರ ಶಿರವಿರೆ ।
ಗರುವಹಂಕಾರತನ ॥

ಪರಿಪರಿ ಪುಷ್ಪದಲಿ ಪೂಜಿಸದೆ ಅಚ್ಯುತನ ।
ಮರೆತಿಹೆ ನಾನನುದಿನ ।
ಅರಿವ ನೋಡಿದರೆ ಎನ್ನಲಿ ಕಾಣೆನೈ ದೇವ ।
ಮರೆಹೊಕ್ಕೆ ಸಲಹೊ ಎನ್ನ-ಸ್ವಾಮಿ ೧

ವೇದ ಶಾಸ್ತ್ರ ಪುರಾಣ ನಾಮವ ನೆನೆವರ ।
ಚೋದ್ಯವ ನಾನರಿಯೆನು ॥
ಹಾದಿಬೀದಿ ತಿರುಗುವ ಜಾರಸ್ತ್ರೀಯಳ ಕಂಡು ವಿ-।
ನೋದಗಳ ಮಾಡುತಿಹೆನು ॥
ಮಾಧವ ಗೋವಿಂದ ಎನ್ನದೆ ಕಾಲನ ।
ಬಾಧೆಗಳಿಗೊಳಗಾದೆನೊ ॥
ಈ ಧರೆಯೊಳಗೆನ್ನ ರಕ್ಷಿಸುವವರ ಕಾಣೆ ।
ಶ್ರೀಧರ ನೀನೆ ಸಲಹೊ ಸ್ವಾಮಿ ೨

ಮಡದಿ ಮಕ್ಕಳಿಗೆಲ್ಲ ಒಡವೆ ಬೇಕೆಂಬುವ ।
ಕಡುಲೋಭತನವ ಬಿಡಿಸೊ ॥
ಅಡಿಗೆ ಅಡಿಗೆ ನಾರಾಯಣನೆಂಬ ನಾಮವನು ।
ನುಡಿವ ನಾಲಿಗೆಗಿರಿಸೊ ॥
ಪೊಡವಿಯೊಳು ಪುರಂದರ ವಿಠಲರಾಯನೆ ನಿನ್ನ ।
ಅಡಿಯದಾಸನೆನಿಸೊ ಸ್ವಾಮಿ ೩

## ೩೩೨

ರಕ್ಷಿಸೋ ಲೋಕನಾಯಕನೆ ನೀ ಎನ್ನ
ರಕ್ಷಿಸೋ ಲೋಕನಾಯಕನೇ ಪ

ಎಷ್ಟೆಷ್ಟು ಜನ್ಮ ಕಳೆದೆನೋ ಇ
ನ್ನೆಷ್ಟೆಷ್ಟು ಜನ್ಮ ಪಡೆವೆನೋ ॥
ಕಷ್ಟವ ಪಡಲಾರೆ ಕೃಷ್ಣ ಕೃಪೆಯನಿಟ್ಟು
ಇಷ್ಟವ ಪಾಲಿಸು ಇಭರಾಜವರದನೆ ೧

ಬಾಲತನದಿ ಬಹು ಬೆಂದೆನೋ ನಾನಾ
ಲೀಲೆಯಿಂದಲಿ ಕಾಲ ಕಳೆದೆನೋ ॥
ಲೋಲಲೋಚನ ಎನ್ನ ಮೊರೆಯ ಕೇಳುತ ಬೇಗ
ಜಾಲವ ಮಾಡದೆ ಪಾಲಿಸೈ ನರಹರಿ ೨

ಮುದುಕನಾಗಿ ಚಿಂತೆಪಡುವೆನೋ ನಾ
ಕದಡು ದುಃಖವ ಪಡಲಾರೆನೋ ॥
ಸದರವಲ್ಲವು ಶ್ರೀ ಪುರಂದರ ವಿಠಲ
ಮುದದಿಂದ ರಕ್ಷಿಸೊ ಖಗರಾಜಗಮನ ೩

## ೩೩೩

ರಾಮಕೃಷ್ಣರು ಮನೆಗೆ ಬಂದರು ಬಾಗಿಲ ತೆರೆಯಿರೊ ।
ಕಾಮಧೇನು ಬಂದಂತಾಯಿತು ಸುಖವ ಸುರಿಯಿರೊ ಪ

ಮಕರಕುಂಡಲ ನೀಲಮುತ್ತಿನ ಚೌಕಳಿ ಇಡುತಲಿ ।
ಸುಕುಮಾರ ಸುಂದರವಾದ ಉಡುಗೆಯುಡುತಲಿ ॥
ಮುಖದ ಕಮಲ ಮುಗುಳನಗೆಯ ಸುಖವ ಕೊಡುತಲಿ ।
ಕಂಕಣ ಹಾರ ತೋಳಬಂದಿ ತೊಡಿಗೆ ತೊಡುತಲಿ ೧

ಚೆಂಡು ಬೊಗರಿ ಚಿಣ್ಣಿಕೋಲು ಗಜುಗವಾಡುತ ।
ದುಂಡುಮಲ್ಲಿಗೆ ತುಂಬಿ ಕೊಳಲನೂದಿ ಪಾಡುತ ॥
ಮಿಂಡೆವೆಂಗಳ ಮುದ್ದುಮೊಗದ ಸೊಗವ ನೋಡುತ ।
ಭಂಡುಮಾಡಿ ಭಾಮೆಯರೊಡನೆ ಸರಸವಾಡುತ ೨

ಪೊಕ್ಕುಳಲ್ಲಿ ಅಜನ ಪಡೆದ ದೇವದೇವನು ।
ಚಿಕ್ಕ ಉಂಗುಟದಿ ಗಂಗೆಯ ಪಡೆದನಾತನು ॥
ಮಕ್ಕಳ ಮಾಣಿಕ್ಯ ಪುರಂದರವಿಠಲ ರಾಯನು ।
ಭಕ್ತ ಜನರಿಗೊಲಿದ ನಿವನು ಮುಕ್ತಿದಾತನು ೩

## ೩೩೪

ಲಕ್ಷ್ಮೀಕಾಂತ ಬಾರೋ ಶುಭ ಲಕ್ಷಣವಂತ ಬಾರೋ ಪ

ಪಕ್ಷಿವಾಹನಾ ಬಾರೋ ಪಾವನ ಮೂರ್ತಿ ಬಾರೋ ಅ.ಪ

ಆದಿಮೂಲ ವಿಗ್ರಹ ವಿನೋದಿ ನೀನೆ ಬಾರೋ
ಸಾಧುಸಜ್ಜನ ಸತ್ಯಯೋನಿ ದಾನಿ ನೀನೆ ಬಾರೋ ೧

ಗಾಡಿಕಾರ ಕೃಷ್ಣ ನಿನ್ನ ಬೇಡಿಕೊಂಬೆ ಬಾರೋ
ರೂಢಿ ಮಾತನಾಡಿ ಸರ್ವ ರೂಢಿಗೊಡೆಯ ಬಾರೋ ೨

ನಿನ್ನ ಪಾದಂಗಳ ನಾನು ಬಣ್ಣಿಸಿ ಕರೆವೆನು ಬಾರೋ
ಪನ್ನಂಗ ಶಯನ ಸಿರಿ ಪುರಂದರ ವಿಠಲ ಬಾರೋ ೩

## ೩೩೫

ವ್ಯಾಪಾರವೆನಗಾಯಿತು
ಶ್ರೀಪತಿಯ ಪಾದಾರವಿಂದ ಸೇವೆಯೆಂಬ ಪ

ಹರಿಕರುಣವೆಂಬಂಗಿ ಗುರು ಕರುಣ ಮುಂಡಾಸು
ಹರಿದಾಸರ ದಯವೆಂಬ ವಲ್ಲಿ ॥
ಪರಮ ಪಾಪಗಳೆಂಬ ಪಾಪೋಸವನೆ ಮೆಟ್ಟಿ
ದುರುಳಾತ್ಮರಾದವರ ಎದೆ ಮೇಲೆ ನಡೆವಂಥ ೧

ಬಿಳಿಯ ಕಾಗದ ಹೃದಯ ಬಾಯಿ ಕಲಮದಾನಿ
ನಾಲಿಗೆಯೆಂಬ ಲೆಕ್ಕಣಿಕೆ ॥
ಶ್ರೀಲೋಲನ ದಿವ್ಯನಾಮವೆಂಬುವ ಲೆಕ್ಕ
ಶೀಲದಿ ಬರೆದು ಶ್ರೀಹರಿಗೆ ಒಪ್ಪಿಸುವಂಥ ೨

ನುಡಿನುಡಿಗಾನಂದಬಾಷ್ಪ ರೋಮಾಂಚನ
ಮುಡುಪಿನೊಳಗೆ ಇಟ್ಟ ಕೈಜೀತವು ॥
ಕಡಿಮೆ ಸಂಬಳಕೆಲ್ಲ ಮುಕ್ತಿಸಾಧನವನ್ನು
ಕೊಡುವ ತೆರನಂತೆ ಚೀಟಿ ಬರೆಸಿಕೊಟ್ಟ ೩

ಹಿಂದಿನ ಸಂಸಾರ ಆಗಮನದ ಭಯ
ಎಂದೆಂದಿಗದರ ಚಿಂತೆಯು ಬಿಟ್ಟಿತು ॥
ಮುಂದಿನ ಸಂಸಾರ ಸ್ಥಾನ ಭಾರಕೆಲ್ಲ
ಸಂದಾಯವನು ಮಾಡಿ ಕತಬಿ ಹರಿಸಿಕೊಟ್ಟ ೪

ಕಂಡಕಂಡವರ ಕಾಲುಗಳಿಗೆರಗಿ ನನ್ನ
ಮಂಡೆ ದಡ್ಡುಗಟ್ಟಿ ಬಳಲಿದೆನೊ ॥
ಪುಂಡರೀಕಾಕ್ಷ ಶ್ರೀ ಪುರಂದರ ವಿಠಲನು
ಕಂಡು ವೀಳೆಯ ಕೊಟ್ಟು ತನ್ನ ಸೇವೆಗೆ ಇಟ್ಟ ೫

## ೩೩೬

ವೆಂಕಟೇಶ ಬೇಡಿಕೊಂಬೆ ಕೃಪೆಯ ಪಾಲಿಸೋ ಬ್ರಹ್ಮ–
ಶಂಕರಾದಿವಂದ್ಯ ಎನಗೆ ಮುಕ್ತಿ ತೋರಿಸೋ ಪ

ಹುಟ್ಟು ಮೊದಲಾದಂಥ ಕಷ್ಟ ಬಿಡಿಸೋ ನಿನ್ನ
ಪಟ್ಟದ ರಾಣಿಗೆ ಹೇಳಿ ಪದವಿ ಕೊಡಿಸೋ ॥
ಇಷ್ಟ ಭಕ್ತಜನರೊಳು ಎನ್ನ ಸೇರಿಸೋ ಈ
ಸೃಷ್ಟಿಯೊಳು ನಿನ್ನ ದಾಸ ದಾಸನೆನಿಸೋ ೧

ಅಟ್ಟು ಉಂಡು ಮಿಕ್ಕಿದ್ದೆಲ್ಲ ಎನಗೆ ಹಾಕಿಸೊ ಪೊಂ–
ಬಟ್ಟಲೊಳಗಿನ ಹಾಲು ಎನಗೆ ಹೊಯ್ಸಿಸೊ ॥
ಗಟ್ಟಿ ಸಕ್ಕರೆ ತುಪ್ಪ ರೊಟ್ಟಿಗಳನು ಉಣ್ಣಿಸೋ ಮುಂದೆ
ಹುಟ್ಟಿ ಬಾಹ ಜನ್ಮಂಗಳ ಎನಗೆ ಬಿಡಿಸೋ ೨

ಕಿಟ್ಟಗಟ್ಟಿದ ಕಬ್ಬಿಣಕ್ಕೆ ಪುಟವ ಹಾಕಿಸೋ–ಉ
ತ್ಕೃಷ್ಟ ಬಂಗಾರದೊಳು ಎನ್ನ ಕೂಡಿಸೋ ॥
ಬೊಟ್ಟಿಗೆ ಉಂಗುರವ ಮಾಡಿ ಎನ್ನ ಸೇರಿಸೋ ಎನಗೆ
ದಿಟ್ಟ ಪುರಂದರವಿಠಲನೆಂಬುದನೆ ಪಾಲಿಸೋ ೩

## ೩೩೭

ವೇಣುನಾದ ಬಾರೊ, ವೆಂಕಟರಮಣನೆ ಬಾರೊ ।
ಬಾಣನ ಭಂಜಿಸಿದಂಥ ಭಾವಜನಯ್ಯನೆ ಬಾರೊ ಪ

ಪೂತನಿಯ ಮೊಲೆಯುಂಡ ನವ–।
ನೀತ ಚೋರನೆ ಬಾರೊ ॥

ದೈತ್ಯರಾವಣನ ಸಂಹರಿಸಿದ ।
ಸೀತಾನಾಯಕ ಬಾರೊ ೧

ಹಲ್ಲು ಮುರಿದು ಮಲ್ಲರ ಗೆದ್ದ ।
ಫುಲ್ಲನಾಭನೆ ಬಾರೊ ॥
ಗೊಲ್ಲತಿಯರೊಡನೆ ನಲಿವ ।
ಚೆಲ್ವ ಮೂರುತಿ ಬಾರೊ ೨

ಮಂದಾರವನೆತ್ತಿದಂಥ ।
ಇಂದಿರಾ ರಮಣನೆ ಬಾರೊ ॥
ಕುಂದದೆ ಗೋವುಗಳ ಕಾಯ್ದ ।
ನಂದನಂದನನೆ ಬಾರೋ ೩

ನಾರಿಯರ ಮನೆಗೆ ಪೋಪ ।
ವಾರಿಜಾಕ್ಷನೆ ಬಾರೋ ॥
ಈರೇಳು ಭುವನವ ಕಾಯ್ವ ।
ಮಾರನಯ್ಯನೆ ಬಾರೊ ೪

ಶೇಷಶಯನ ಮೂರುತಿಯಾದ ।
ವಾಸುದೇವನ ಬಾರೊ ॥
ದಾಸರೊಳು ವಾಸವಾದ ।
ಶ್ರೀಶ ಪುರಂದರ ವಿಠಲ ಬಾರೊ ೫

## ೩೩೮

ವೈದ್ಯವ ನಾನರಿಯೆ ಭವರೋಗದ ।
ವೈದ್ಯ ನೀನೆ ಹರಿಯೆ ಪ

ನೀ ದಯದಿಂದೆನ್ನ ರಕ್ಷಿಸು
ಆದಿವೈದ್ಯ ಮುನ್ನ ।
ಪಾದೋದಕವನು ಎನಗೆ ಕೊಡಿಸು ಸರ್ವ–॥
ವ್ಯಾಧಿನಿವಾರಣ ಕಷಾಯ ನೀ ಕೊಡು ೧

ಹರಿ ನಿನ್ನ ಕರುಣವೆಂಬ ಸ್ಮರಣೆಯ ।
ತ್ವರಿತ ಜ್ಞಾನದಿಂದ ॥
ಉರುತರ ಮಹಾತ್ಮೆಯ ಎನಗೆ ಕೊಡಿಸು ಸರ್ವ ॥
ದುರಿತನಿವಾರಣ ಕಷಾಯ ನೀ ಕೊಡು ೨

ಕೃಷ್ಣ ನೀ ಕೃಪೆವಿಡಿದು ಕಪಟದ ।
ಉಷ್ಣವಾಯುವಳಿದು ॥
ವಿಷ್ಣುಶಕ್ತಿಯೆಂಬ ಅಭಯವ ಎನಗಿತ್ತು ।
ಇಷ್ಟವ ಸಲಿಸುವ ತೃಪ್ತಿಪಡಿಸುವಂಥ ೩

ನಿನ್ನ ದಾಸ ನಾನು ದುರಿತಗ
ಳೆನ್ನ ಕಾಡುವುವೇನು ॥
ಚೆನ್ನಾಗಿ ಕಾಯಕೆ ಶಕ್ತಿಯನಿತ್ತು ದೃಢ–।
ವನ್ನು ಮಾಡಿ ಶ್ರೀಹರಿ ಸಲಹೆನ್ನನು ೪

ಪಂಡಿತ ದಯಾಸಿಂಧು ಕಾಡುವ ।
ಪಾಂಡುರೋಗ ಕೊಂದು ॥
ಪುಂಡರೀಕಾಕ್ಷ ಶ್ರೀಪುರಂದರವಿಠಲ ಅ–।
ಖಂಡಮೂರುತಿ ಶ್ರೀಹರಿ ಸಲಹೆನ್ನನು ೫

## ೩೩೯

ಶರಣು ಶರಣು ನಿನಗೆಂಬೆನೊ ವಿಠಲ
ಎರವು ಮಾಡದೆಯೆನ್ನ ಕಾಯೊ ವಿಠಲ ಪ

ಅರಸಿ ರುಕ್ಮಿಣಿಗೆ ನೀನೇನೆಂದೆಯೊ ವಿಠಲ
ಸರಸಿಜಸಂಭವ ಸನ್ನುತ ವಿಠಲ ॥
ಬಿರುದಿನ ಶಂಖವ ಪಿಡಿದೆಯೊ ವಿಠಲ
ಅರಿತು ಇಟ್ಟಿಗೆಯ ಮೇಲೆ ನಿಂತೆಯೊ ವಿಠಲ ೧

ಶಶಿಮುಖಿ ಗೋಪಿಯರ ರಾಜನೆ ವಿಠಲ
ಕುಶಲದಿ ಗಜುಗವನಾಡಿದೆ ವಿಠಲ ॥

ದಶರಥನಂದನ ರಾಮನೆ ವಿಠಲ
ಕುಸುಮ ಬಾಣನಯ್ಯ ಕಾಯೊ ನೀ ವಿಠಲ ೨

ಕಂಡೆ ಗೋಪುರದ ವೆಂಕಟನೆ ವಿಠಲ
ಅಂಡಜಾಧಿಪ ವಾಹನನೆ ವಿಠಲ ॥
ಪಂಡರಿಕ್ಷೇತ್ರದ ಪಾಲನೆ ವಿಠಲ
ಪುಂಡರೀಕ ವರದ ಪುರಂದರ ವಿಠಲ ೩

## ೩೪೦

ಶ್ರೀನಿವಾಸಾ ನೀನೇ ಪಾಲಿಸೋ ಶ್ರಿತಜನಪಾಲ
ಗಾನಲೋಲ ಶ್ರೀ ಮುಕುಂದನೇ ಪ

ಧ್ಯಾನಮಾಳ್ಪ ಸಜ್ಜನರ ಮಾನದಿಂ ಪರಿಪಾಲಿಸುವ
ವೇಣು ಗೋಪಾಲ ಗೋವಿಂದ ವೇದವೇದ್ಯ ನಿತ್ಯಾನಂದ ಅ.ಪ

ಎಂದಿಗೆ ನಿನ್ನ ಪದಾಬ್ಜವ ಪೊಂದುವ ಸುಖ
ಎಂದಿಗೆ ಲಭ್ಯವೋ ಮಾಧವಾ ॥
ಅಂಧಕಾರಣ್ಯದಲ್ಲಿ ನೊಂದು ತತ್ತಳಿಸುತಿಹ
ಅಂದದಿಂದ ಈ ಭವದಿ ನಿಂದು ನೊಂದೆನೋ ಮುಕುಂದ ೧

ಎಷ್ಟುದಿನ ಕಷ್ಟಪಡುವುದೋ ಯಶೋದೆಯ ಕಂದ
ದೃಷ್ಟಿಯಿಂದ ನೋಡಲಾಗದೆ ॥
ಮುಟ್ಟಿ ಭಜಿಸುವನಲ್ಲ ಕೆಟ್ಟ ನರಜನ್ಮದವನು
ದುಷ್ಟಕಾರ್ಯ ಮಾಡಿದರು ಇಷ್ಟನಾಗಿ ಕೈಯ ಹಿಡಿದು ೨

ಅನುದಿನ ಅನೇಕ ರೋಗಗಳ ಅನುಭವಿಸಿದೆನೊ
ಘನಮಹಿಮ ನೀನೆ ಬಲ್ಲೆಯೋ ॥
ತನುವಿನಲ್ಲಿ ಬಲವಿಲ್ಲ ನೆನೆದ ಮಾತ್ರ ಸಲಹುವ
ಹನುಮದೀಶ ಪುರಂದರ ವಿಠಲ ನೀ ಎನಗೆ ಒಲಿದು ೩

## ೩೪೧

ಸಜ್ಜನರ ಸಂಗ ನಮಗೆಂದಿಗಾಗುವುದೊ ।
ದುರ್ಜನರ ಸಂಗದಿಂದಲಿ ನೊಂದೆ ಹರಿಯೆ ಪ

ವಾಕು ವಾಕಿಗೆ ಡೊಂಕನೆಣಿಸುವರು ಮತ್ತೆ ।
ಪೋಕರಾಡಿದ ಮಾತು ನಿಜವೆಂಬರು ॥
ವಾಕ್‌ಶೂಲಗಳಿಂದ ನೆಡುವರುಪರರನೀ ।
ಪೋಕುಮಾನವರಿಂದ ನೊಂದೆ ಹರಿಯೆ ೧

ತಾವೆ ತಮ್ಮನ್ನು ಕೊಂಡಾಡಿಕೊಳ್ಳುವರು ।
ನ್ಯಾಯವಿಲ್ಲದೆ ನುಡಿವರು ಪರರ ॥
ಭಾವಿಸಲರಿಯರು ಗುರುಹಿರಿಯರನಿಂಥ ।
ಹೇಯ ಮನುಜರಿಂದ ನೊಂದೆ ಹರಿಯೆ ೨

ಬಡಜನರನು ಕೊಂದು ಅಡಗಿಸಿಕೊಂಬರು ।
ಬಿಡಲೊಲ್ಲರು ಹಿಡಿದನ್ಯಾಯವ ॥
ನುಡಿದು ಕೇಡನು ಒಡನೆ ತಪ್ಪಿಸಿಕೊಂಬಂಥ
ಕಡು ಮೂರ್ಖರಿಂದ ನಾ ನೊಂದೆನು ಹರಿಯೆ ೩

ತೊತ್ತಿನೊಡನೆ ತನ್ನ ಸ್ನೇಹ ಸರಸ ಮಾತು ।
ತೆತ್ತಿಗರೊಡನೆ ಪಂಥವ ನುಡಿವರು ॥
ಸತ್ತಬಳಿಕ ಸೃಷ್ಟಿ ಸಟೆಯೆಂಬರು ಇಂಥ ।
ಮತ್ತ ಮನುಜರಿಂದ ನೊಂದೆ ಶ್ರೀಹರಿಯೆ ೪

ಇಷ್ಟುದಿನವು ನಿನ್ನ ನೆನೆಯದ ಕಾರಣ ।
ಕಷ್ಟಪಡುವ ಕೈ ಮೇಲಾಗಿ ॥
ಸೃಷ್ಟಿಗೊಡೆಯ ಶ್ರೀ ಪುರಂದರವಿಠಲನೆ ।
ಮುಟ್ಟಿ ಭಜಿಸಬೇಕು ಧೃಷ್ಟಮನವು ನಿನ್ನ ೫

## ೩೪೨

ಸಂದಿತಯ್ಯ ಪ್ರಾಯವು ।
ಸಂದಿತಯ್ಯ ಪ್ರಾಯವು ಪ

ಮೂರು ತಿಂಗಳು
ಸಂದುಹೋಯಿತು ತಿಳಿಯದೆ ॥
ಬಂದೆ ತಾಯಿಯ ಜಠರದಲಿ ಮ–।
ತ್ತೊಂದು ಬುದ್ಧಿಯನರಿಯದೆ ॥
ಬೆಂದೆ ನವಮಾಸದಲಿ ಗರ್ಭದಿ ।
ಒಂದು ದಿವಸವು ತಡೆಯದೆ ॥
ಕುಂದದೀಪರಿಯೊಂದು ವರುಷವು ।
ಇಂದಿರೇಶನೆ ಕೇಳು ದುಃಖವ ೧

ಕತ್ತಲೆಯೊಳಿರಲಾರೆನೆನುತಲಿ ।
ಹೊತ್ತೆ ಹರಕೆಯ ನಿನ್ನನು ॥
ಮತ್ತೆ ಜನಿಸಲು ಭೂಮಿಯೊಳು ನಾ ।
ಅತ್ತುನಿನ್ನನು ಮರೆತೆನು ॥
ಮತ್ತೆ ಮಲ ಮೂತ್ರದೊಳು ಬಾಲ್ಯದಿ ।
ಹೊತ್ತು ದಿನಗಳ ಕಳೆದೆನು ॥
ಮತ್ತೆ ನರಕದೊಳುರುಳುತುರುಳುತ ।
ಉತ್ತಮೋತ್ತಮ ನಿನ್ನ ನೆನೆಯದೆ ೨

ಚಿಕ್ಕತನವನು ಮಕ್ಕಳಾಟದಿ ।
ಅಕ್ಕರಿಂದಲಿ ಕಳೆದೆನು ॥
ಸೊಕ್ಕಿ ಹದಿನಾರಲಿ ನಾನತಿ ।
ಮಿಕ್ಕಿ ನಡೆದೆನು ನಿನ್ನನು ॥
ಸಿಕ್ಕಿ ಬಹು ಸಂಸಾರ ಮಾಯೆಯ ।
ಕಕ್ಕುಲತೆಯೊಳು ಬಿದ್ದೆನು ॥
ಹೊಕ್ಕುದಿಲ್ಲವು ನಿನ್ನ ಪಾದವ ।
ರಕ್ಕಸಾರಿಯೆ ಕೇಳು ದುಃಖವ ೩

ಸುಳಿದೆ ಮನೆಮನೆ ಕಳೆದೆ ಕಾಲವ ।
ಉಳಿದ ಯೋಚನೆ ಮಾಡದೆ ॥
ಬೆಳೆದೆ ತಾಳೆಯ ಮರದ ತೆರದಲಿ ॥
ಉಳಿವ ಬಗೆಯನು ನೋಡದೆ ॥
ಎಳೆಯ ಮನದೊಳೆ ಇಳೆಯ ಜನರೊಳು ।
ಬಳಕೆ ಮಾತುಗಳಾಡಿದೆ ॥
ಕಳೆದೆ ಈ ಪರಿಯಿಂದ ಕಾಲವ ।
ನಳಿನನಾಭನೆ ನಿನ್ನ ನೆನೆಯದೆ ೪

ಎಡೆಬಿಡದೆ ಅನುದಿನದಿ ಪಾಪದ ।
ಕಡಲೊಳಗೆ ನಾನಾಳ್ದೆನು – ॥
ದರವ ಕಾಣದೆ ಮಧ್ಯದಲಿ ಎ–।
ನ್ನೊಡಲೊಳಗೆ ನಾನೊಂದನು ॥
ದೃಢದಿ ನಿನ್ನಯ ಧ್ಯಾನವೆಂಬಾ ।
ಹಡಗವೇರಿಸು ಎನ್ನನು ॥
ಒಡೆಯ ಪುರಂದರವಿಠಲ ಎನ್ನನು ।
ಬಿಡದೆ ಕಾಯ್ಕೆ ಬೇಗ ಶ್ರೀ ಹರಿ ೫

## ೩೪೩

ಸಲ್ಲದೋ ಕೃಷ್ಣ ಸಲ್ಲದೋ ಸಿರಿ
ವಲ್ಲಭ ಇದ ನೋಡು ಪಾಲಿಸಬೇಕೋ ಪ

ಬಿತ್ತಿ ಬೆಳೆಸಿ ತಲೆಯೆತ್ತಿದ ಪೈರನು
ಮತ್ತೆ ತುರುವಿಂಡನು ಬಿಟ್ಟು ಮೆಲ್ಲಿಸುವುದು ೧

ಸಾವಿರ ಹೊನ್ನಿಕ್ಕಿ ಸದನವ ಸಾಧಿಸಿ
ಪಾವಕನುರಿಗೆ ನೀನೊಪ್ಪಿಸಿ ಕೊಡುವುದು ೨

ಕುಶಲದಿ ಬಣ್ಣಿಸಿ ಬರೆದು ಚಿತ್ತಾರವ
ಮಸಿ ಮಣ್ಣ ಮಾಡಿ ನೀ ಕೆಡಿಸುವುದು ೩

ಬಲುಕಾಲ ಮುದ್ದಿಸಿ ಕಲಿಸಿ ಮಾತುಗಳನು
ಗಿಳಿಯ ಸಾಕಿ ಬಾವುಗಗೆ ಒಪ್ಪಿಸುವುದು ೪

ಕರುಣಿಸು ಸಿರಿ ಪುರಂದರ ವಿಠಲ ನಮ್ಮ
ಹಿರಿದು ಮಾಡಿ ಮತ್ತೆ ಕಿರಿದು ಮಾಡುವುದು ೫

## ೩೪೪

ಸಾಕು ಸಾಕಿನ್ನು ಸಂಸಾರಸುಖವು ।
ಶ್ರೀಕಾಂತ ನೀನೊಲಿದು ಕರುಣಿಸೈ ಹರಿಯೆ ಪ

ಉದಿಸಿದುವು ಪಂಚಭೂತಗಳಿಂದ ಔಷಧಿಗ–।
ಳುದಿಸಿದುವು ಔಷಧಿಗಳಿಂದನ್ನವು ॥
ಉದಿಸಿದುವು ಅನ್ನದಿಂ ಶುಕ್ಲ ಶೋಣಿತವೆರಡು ।
ಉದಿಸಿದುವು ಸ್ತ್ರೀ ಪುರುಷರಲ್ಲಿ ಹರಿಯೆ ೧

ಸತಿಪುರುಷರೊಂದಾಗಿ ರತಿಕ್ರೀಡೆಗಳ ಮಾಡೆ ।
ಪತನವಾದಿಂದ್ರಿಯವು ಹೊಲೆ ರುಧಿರವು ॥
ಸುದತಿಯುದರದೊಳೆರಡು ಏಕದಲಿ ಸಂಧಿಸಲು ।
ಬುದಬುದನೆ ಮಾಸಪರ್ಯಂತರದಿ ಹರಿಯೆ ೨

ಮಾಸವೆರಡರಲಿ ಶಿರ ಮಾಸ ಮೂರರಲಂಗ ।
ಮಾಸ ನಾಲ್ಕರಲಿ ಚರ್ಮದ ಹೊದಿಕೆಯು ॥
ಮಾಸವೈದರೊಳು ನಖ ರೋಮ ನವರಂಧ್ರಗಳು ।
ಮಾಸವೇಳರಲಿ ಧಾತು ಹಸಿವು ತೃಷೆಯು ೩

ತಿಂಗಳೆಂಟರಲಿ ಪೂರ್ವಾನುಭವ ಕರ್ಮಗಳ ।
ಭಂಗವನು ಪಡಲಾರೆ ಭವಭವದೊಳು ॥
ಅಂಗನೆಯ ಉದರಕಿನ್ನೆಂದಿಗೂ ಬರೆನೆಂದು ।
ಹಿಂಗದಲೆ ಧ್ಯಾನಿಸುತ ಕಳೆದೆನೈ ದಿನವ ೪

ಇನಿತು ಗರ್ಭದೊಳು ನವಮಾಸ ಪರಿಯಂತರದಿ ।
ತನು ಸಿಲುಕಿ ನರಕದಲಿ ಆಯಾಸಗೊಂಡು ॥

ಘನಮರುತವೇಗದಿಂ ಅರುಹನಲ್ಲಿಯೆ ಮರೆತು
ಜನಿಸುವಲಿ ಮೃತಭಾವದೊಳು ನೊಂದೆ ಹರಿಯೆ ೫

ಧರೆಯಮೇಲುದಿಸಿ ಬಹು ವಿಷ್ಣುಮಾಯೆಗೆ ಸಿಲುಕಿ ।
ಪರವಶದೊಳಿರಲು ನೀರಡಿಸಲಾಗ ॥
ಹೊರಳಿ ಗೋಳಿಡುತ ಕಣ್ದೆರೆಯೆ ಹರಿಯನು ಮರೆವ ।
ದುರಿತರೂಪದ ತನುವ ಧರಿಸಿದೆನೊ ಹರಿಯೆ ೬

ಶಿಶುತನದೊಳಿರಲು ನೊಣ ಮುಸುಕಲಂದದಕಳಲು ।
ಹಸಿದನಿವನೆಂದು ಹಾಲನೆ ಎರೆವರು ॥
ಹಸು ತೃಕ್ಷೆಗಳಿಂದಳಲು ಹಾಡಿ ತೂಗುವರಾಗ ।
ಪಶುವಂತೆ ಶಿಶುತನದೊಳಿರಲಾರೆ ಹರಿಯೆ ೭

ನಡೆಯಲರಿಯದ ದುಃಖ ಮನಸಿನೊಳು ಬಯಸಿದುದ ।
ನುಡಿಯಲರಿಯದ ದುಃಖ ವಿಷಮದಿಂದ ॥
ಅಡಿಯಿಡುತ ಮೆಲ್ಲನೇಳುತ ಬೀಳುತಲಿ ತೊದಲು–।
ನುಡಿಯೊಳಿಹ ಬಾಲ್ಯದೊಳಗಿಲಾರೆ ಹರಿಯೆ ೮

ಬಾಲ್ಯದೊಳು ಕೆಲವು ದಿನ ಬರಿದೆ ಹೋಯಿತು ಹೊತ್ತು ।
ಗೋಳಿಡುತ ವಿದ್ಯೆ ಕರ್ಮಗಳ ಕಲಿತು ॥
ಮೇಲೆ ಯೌವನದುಬ್ಬಿನೊಳು ಮದುವೆಯಾಗಿ ನಾ
ಬಾಲೆಯರ ಬಯಸಿ ಬಹು ಮರುಳಾದೆ ಹರಿಯೆ । ೯

ಜ್ವರದ ಮೇಲತಿಸಾರ ಬಂದಂತೆ ಯೌವನದಿ ।
ತರುಣಿಯೊಡನಾಡಿ ಕೂಡಿದ ವಿಷಯದಿ ॥
ತರುಣಿ ಸುತರ್ಗನ್ನ ವಸ್ತ್ರಾಭರಣವೆಂದೆನುತ ।
ಪರರ ಸೇವೆಯಲಿ ನಾ ಕಡುನೊಂದೆ ಹರಿಯೆ ೧೦

ನೆತ್ತರವು ತೊಗಲು ಮಾಂಸದ ಹುತ್ತು ಜೊತ್ತುಗಳ ।
ಹತ್ತು ಇಂದ್ರಿಯದ ಬಹುರೋಗದಿಂದ ॥
ಮತ್ತೆ ಕಾಲನ ಬಾಯತುತ್ತು ಬಹುವಿಧ ಕರ್ಮ–॥
ಕತ್ತಲೆಯೊಳೀ ದೇಹ ಕರಕಾಯ್ತು ಹರಿಯೆ ೧೧

ದಿಟ್ಟತನದಲಿ ಗಳಿಸಿ ತರುವಾಗ ಸತಿಸುತರು ।
ಕಟ್ಟಿ ಕಾದಿಹರು ಮುಪ್ಪಡಸಲಾಗ ॥
ತಟ್ಟನೇ ಕೆಟ್ಟನುಡಿಗಳ ಬಯ್ಯುತಳಲುವರು ।
ಮುಟ್ಟಿನೋಡರು ಸರಕುಮಾಡರ್ಯೆ ಹರಿಯೆ ೧೨

ಎಷ್ಟವಜ್ಞೆಯ ಮಾಡೆ ಮತ್ತವನಿಗಳಲುತಿರೆ ।
ಕಟ್ಟಳೆಯ ದಿನ ತುಂಬಿ ಮೃತನಾಗಲು ॥
ಕುಟ್ಟಿಕೊಂಡಳುತ ಹೋಯೆನುತ ಬಂಧುಗಳೆಲ್ಲ ।
ಮುಟ್ಟದಲೆ ಹೆಣನೆಂದು ದೂರದೊಳಗಿಹರು ೧೩

ಸತ್ತ ಹೆಣಕಳಲೇತಕೆಂದು ಬಂಧುಗಳೆಲ್ಲ ।
ಸುತ್ತಿರ್ದು ಹೊತ್ತು ಹೋಯಿತು ಎನ್ನುತ ॥
ಹೊತ್ತು ಕೊಂಡಗ್ನಿಯಲಿ ತನುವ ಬೀಸಾಡುವರು ।
ಮತ್ತೆ ಧರಣಿಯಲಿ ನಾ ಜನಿಸಬೇಡವೊ ಹರಿಯೆ ೧೪

ಇನ್ನು ಈ ಪರಿಪರಿಯ ಯೋನಿಮುಖದಲಿ ಬಂದು ।
ಬನ್ನವನು ಪಡಲಾರೆ ಭವಭವದೊಳು ॥
ಜನ್ಮ ಮರಣಾದಿ ಕ್ಲೇಶಗಳನ್ನು ಪರಿಹರಿಸಿ ।
ಸನ್ಮತಿಯೊಳಿರಿಸೆನ್ನ ಪುರಂದರವಿಠಲ ೧೫

## ೩೪೫

ಸಿಕ್ಕಿದೆಯೋ ಎಲೆ ಜೀವ ನಿನ್ನ
ಕುಕ್ಕಿ ಕೊಲ್ಲದೆ ಬಿಡರು ಪ

ಸೊಕ್ಕಿದ ಹೆಣ್ಣಿಗೆ ನೀ ಮರುಳಾದೆ ।
ಉಕ್ಕಿನ ಕಂಬಕೆ ನೀ ಗುರಿಯಾದೆ ಅ.ಪ

ಹಾಳೂರ ಕೋಳಕೆ ಕಾಲು ಚಾಚಿದ ಹಾಗೆ ।
ಮೂಳ ಸಂಸಾರಕೆ ನೀ ಗುರಿಯಾಗಿ ॥
ತೇಲುತ ಮುಳುಗುತ ಇಲ್ಲಿಗೆ ಬಂದೆ ೧

ಸತಿ–ಸುತರೆಂಬುವರೆ ಹಿತರೆಂದು ನಂಬಿದೆಯೊ ।
ಯತಿಗಳ ತಿಥಿಗಳು ಬಂದರೆ ಮನೆಗೆ ॥
ಗತಿಯಿಲ್ಲವೆಂದು ಖತಿಗೊಂಡೆಯಲ್ಲೊ ೨

ಶುನಕನಂದದಿ ನೀನು ಮನೆಮನೆಯನು ತಿರುಗಿ ।
ಘನ ಘನವಾದ ಕೂಳನೆ ತಿಂದು ॥
ತನುವ ತಗ್ಗಿಸಿ ಇಲ್ಲಿಗೆ ಬಂದೆ ೩

ಕಂಡವರ ಒಡವೆಯ ಖಂಡುಗ ಧನವನು ।
ಮಿಂಡೆಯರ ಒಡವೆಯ ಭಂಡತನದಲಿ ॥
ಕಂಡುಕಾಣದೆ ನೀ ತಿಂದೆಯಲ್ಲೊ ೪

ಗೋಪಾಲಕೃಷ್ಣಯ್ಯ ತಾಪತ್ರಯವ ಕಳೆವ ।
ಆಪತ್ತೆಲ್ಲ ಪರಿಹಾರ ಮಾಡುವ ॥
ಶ್ರೀಪತಿ ಪುರಂದರವಿಠಲನ ನೆನೆಯದೆ ೫

## ೩೪೬

ಹರಿದಾಸರ ಸಂಗ ದೊರೆಯಿತು ಎನಗೀಗ ಇನ್ನೇನಿನ್ನೇನು
ವರಗುರು ಉಪದೇಶ ನೆರವಾಯ್ತು ಎನಗೀಗ ಇನ್ನೇನಿನ್ನೇನು ಪ

ಮಾಯದ ಸಂಸಾರ ಮಮಕಾರ ತಗ್ಗಿತು ಇನ್ನೇನಿನ್ನೇನು
ತೋಯಜಾಕ್ಷನ ನಾಮ ಜಿಹ್ವೆಯೊಳ್ನೆಲಸಿತು ಇನ್ನೇನಿನ್ನೇನು ೧

ಹಲವು ದೈವಗಳೆಂಬ ಹಂಬಲ ಬಿಟ್ಟಿತು ಇನ್ನೇನಿನ್ನೇನು
ಜಲಜನಾಭನ ಧ್ಯಾನ ಹೃದಯದೊಳ್ನೆಲಸಿತು ಇನ್ನೇನಿನ್ನೇನು ೨

ತಂದೆ ತಾಯೆ ಮುಚುಕುಂದವರದನಾದ ಇನ್ನೇನಿನ್ನೇನು
ಸಂದೇಹವಿಲ್ಲ ಮುಕುಂದ ದಯಮಾಡಿದ ಇನ್ನೇನಿನ್ನೇನು ೩

ಏನೆಂದು ಹೇಳಲಿ ಆನಂದ ಸಂಭ್ರಮ ಇನ್ನೇನಿನ್ನೇನು
ಆ ನಂದಗೋಪನ ಕಂದನ ಮಹಿಮೆಯ ಇನ್ನೇನಿನ್ನೇನು ೪

ಎನ್ನವಂಶಗಳೆಲ್ಲ ಪಾವನವಾದುವು ಇನ್ನೇನಿನ್ನೇನು
ಚಿನ್ಮಯ ಪುರಂದರವಿಠಲಯ್ಯ ದೊರಕಿದ ಇನ್ನೇನಿನ್ನೇನು ೫

## ೩೪೭

ಹರಿ ನೀನೇ ಗತಿಯೆಂದು ನೆರೆನಂಬಿದವರನು
ಮರೆತಿರುವುದು ನ್ಯಾಯವೆ? ಪ

ಗರುಡಗಮನ ನೀ ಸಿರಿಲೋಲನಾಗೆ ।
ಅರಸಿ ಎನ್ನನು ಕಾಯ್ವ ದೊರೆಗಳಿನ್ನಾರಯ್ಯ ಅ.ಪ

ಮುಟ್ಟಿ ಪೂಜಿಸಿ ನಿನ್ನ ಇಷ್ಟವ ಬೇಡುವ
ದೃಷ್ಟಿಯೆನ್ನೊಳಗಿದೆಯೆ?
ಕಷ್ಟವ ಪಡಲಾರೆ ಸೃಷ್ಟಿಯೊಳಗೆ ಎನ್ನ
ದುಷ್ಟ ಕರ್ಮವ ಬಿಡಿಸಿ ದಿಟ್ಟನೆಂದೆಣಿಸೊ ೧

ಭುಜಗಶಯನ ನಿನ್ನ ಭಜಕರ ಹೃದಯದಿ
ನಿಜವಾಗಿ ನೀನಿಲ್ಲವೇ?
ಅಜನ ಪಿತನೆ ಕೇಳು ತ್ರಿಜಗವೆಲ್ಲವು ನಿನ್ನ
ಸುಜನಪಾಲಕನೆಂದು ಭಜನೆ ಮಾಳ್ಪುದ ಕಂಡು ೨

ಭಾಗವತರರಸನೆ ಯೋಗಿಗಳೊಡೆಯನೆ
ಬಾಗಿ ಬಿನ್ನಯಿಪೆ ನಿನ್ನ
ಸಾಗರಶಯನನೆ ನೀಗಿಸಿ ಶ್ರಮವನು
ಜಾಗು ಮಾಡದೆ ಎನ್ನ ಬೇಗದಿ ಕಾಯಯ್ಯ ೩

ತುಂಟರೈವರ ತುಳಿದು ಕಂಟಕನೊಬ್ಬನ ಕಳೆದು ।
ಎಂಟು ಮಂದಿಯ ಗರುವವನಳಿದು ॥
ನಂಟ ನೀ ಬಂದೆನ್ನ ಕಂಟಕವನೆ ಬಿಡಿಸಿ ।
ಉಂಟಾದ ವೈಕುಂಠ ಬಂಟನೆಂದೆನಿಸೊ ೪

ಧರಣಿಯೊಳಗೆ ನೀ ಸುಜನರ ಸಲಹುವ
ಬಿರುದು ಪಡೆದವನಲ್ಲವೆ? ॥
ಸಿರಿರಮಣನೆ ಎನ್ನ ಕರುಣದಿಂದಲಿ ಕಾಯೊ ।
ಪರಮಪುರುಷ ಸಿರಿ ಪುರಂದರ ವಿಠಲ ೫

## ೩೪೮

ಹರಿಹರಿಯೆನಲಿಕ್ಕೆ ಹೊತ್ತಿಲ್ಲ-ರಂಗಯ್ಯ ।
ಹರಿಹರಿಯೆನಲಿಕ್ಕೆ ಹೊತ್ತಿಲ್ಲ ಪ

ಧಾರಣೆಯ ಮಾಡುವಾಗ ಪಾರಣೆಯ ಚಿಂತೆ ।
ದೂರಯಾತ್ರೆ ಮಾಡುವಾಗ ಧಾರಣೆಯ ಚಿಂತೆ ೧

ನಿತ್ಯ ಯಾತ್ರೆ ಮಾಡುವಾಗ ಪುತ್ರರ ಮೇಲಿನ ಚಿಂತೆ ।
ಎತ್ತ ನೋಡಿದರತ್ತ ಉದರದ ಚಿಂತೆ ೨

ಸ್ನಾನವನ್ನು ಮಾಡುವಾಗ ಮಾನಿನಿ ಮೇಲಿನ ಚಿಂತೆ
ದಾನವನ್ನು ಕೊಡುವಾಗ ಧನದ ಮೇಲಿನ ಚಿಂತೆ ೩

ದೇವತಾರ್ಚನೆ ಮಾಡುವಾಗ ಸಂಸಾರದ ಚಿಂತೆ ಅ-।
ದಾವಾಗ ನೋಡಿದರು ಪರರ ಕೇಡಿನ ಚಿಂತೆ ೪

ಗಂಗೆಯ ಮೀಯುವಾಗ ತಂಬಿಗೆ ಮೇಲಿನ ಚಿಂತೆ ।
ಸಂಗಡ ಬಂದವರೆಲ್ಲ ಹೋಗುವರೆಂಬ ಚಿಂತೆ ೫

ಡಂಭಕತನಕೆ ಸಿಕ್ಕಿ ಭಂಗವ ಪಡುವೆ ತಂದೆ ।
ಇಂಬನಿತ್ತು ರಕ್ಷಿಸೈ ಪುರಂದರವಿಠಲನೆ ೬

## ೩೪೯

ಹೀಗೆ ಮಾಡಬೇಕೋ-ವಿಠಲ ತಂದೆ
ಹೀಗೆ ಮಾಡಬೇಕೋ ಪ

ಹೇಗಾದರು ದುರಿತಗಳೆನ್ನ ಕಾಡದ
ಹಾಗೆ ಮಾಡ ಬೇಕೋ ಅ.ಪ

ಹಿಂದಿನ ಸುಕೃತಗಳ ಫಲದಿಂದ ಬಂದೀ ನರಜನುಮ
ಮುಂದೆ ನಾ ತಾಯ ಉದರದಲಿ ಜನಿಸದ
ಹಾಗೆ ಮಾಡಬೇಕೋ ವಿಠಲ ತಂದೆ ೧

ದಾನಿ ನಿನ್ನನು ಬೇಡುವೆ ದುಷ್ಕರ್ಮದ –ಹಾನಿಯೊಂದೇ ಸಾಲದೆ
ಹೀನ ಮಾನವರಿಗೆ ನಾನು ಕೈಯಾನದ
ಹಾಗೆ ಮಾಡಬೇಕೋ ವಿಠಲ ತಂದೆ ೨

ಕರುಣಿ ಪುರಂದರ ವಿಠಲ ತಂದೆ ನೆರೆ ನಂಬಿದೆ ನಿನ್ನ
ಶರಣ ರಕ್ಷಕನೆಂಬ ಬಿರುದು ಬೇಕಾದರೆ
ಹೀಗೆ ಮಾಡಬೇಕೋ ವಿಠಲ ತಂದೆ ೩

## ೩೫೦

ಹುಚ್ಚು ಹಿಡಿಯಿತೊ ಎನಗೆ ಹುಚ್ಚು ಹಿಡಿಯಿತು ಪ

ಅಚ್ಯುತನ ನಾಮವೆಂಬ ಮೆಚ್ಚು ಮದ್ದು ತಲೆಗೆ ಏರಿ ಅ.ಪ

ವಾಸುದೇವನೆಂಬ ನಾಮ ವದನದಲಿ ಒದರುವೆ ಮಾಯ
ಪಾಶವೆಂಬ ಬಲೆಯ ಹರಿದು ಹರಿದು ಬಿಸುಡುವೆ ॥
ಕೇಶವನ ಹೂವ ಎನ್ನ ಮುಡಿಗೆ ಮುಡಿಸುವೆ ಭವದ
ಕ್ಲೇಶವೆಂಬ ಗೋಡೆಯನ್ನು ಕೆದರಿಕೆದರಿ ಬಿಸುಡುವಂಥ ೧

ಕೃಷ್ಣನಂಘ್ರಿಕಮಲಗಳಲಿ ನಲಿದು ನಲಿದು ಬೀಳುವೆ ಭವ
ಕಷ್ಟವೆಂಬ ಕುಂಭಗಳನು ಒಡೆದು ಒಡೆದು ಹಾಕುವೆ ॥
ನಿಷ್ಠರನ್ನುಕಂಡವರ ಹಿಂದೆ ಹಿಂದೆ ತಿರುಗುವೆ
ಭ್ರಷ್ಟ ಮನುಜರನ್ನು ಕಂಡು ಕಲ್ಲು ಕಲ್ಲಿಲಿಕ್ಕುವಂಥ ೨

ಮಂದಮತಿಗಳನು ಕಂಡರೆ ಮೂಕನಾಗುವೆನು ಹರಿಯ
ನಿಂದೆ ಘಡುವವರ ಮೇಲೆ ಮಣ್ಣ ಚೆಲ್ಲುವೆ ॥
ಮಂದರಾದ್ರಿಧರನ ದಿನದೊಳನಶನನಾಗುವೆ ಎನ್ನ
ತಂದೆ ಪುರಂದರವಿಠಲನ ಪೊಗಳಿ ಪಾಡಿ ಆಡುವಂಥ ೩

## ೩೫೧

ಹೇಗೆ ಶ್ರೀಹರಿ ದಯ ಮಾಡುವನೋ ನಮಗೆ ।
ಹೇಗೆ ಶ್ರೀಹರಿ ದಯ ಮಾಡುವನೊ ಪ

ಯೋಗಿವರೋದಿತ ಭಾಗವತಾದಿ ಸ–।
ದಾಗಮಗಳನನುರಾಗದಲಿ ನೆನೆಯದಗೆ ೧

ಶಕ್ತಿಮೀರಿ ಗುರುಭಕ್ತಿಪೂರ್ವಕ ಹರಿ–।
ಭಕ್ತಿ ಇಲ್ಲದ ಕುಯುಕ್ತಿವಂತರಿಗೆ ೨

ದಾಸದಾಸ ಎನ್ನೀಶಗೆ ಮೊರೆಯಿಡೆ ।
ಲೇಸು ಕೊಡುವ ನಮ್ಮ ಪುರಂದರವಿಠಲ ೩

ಇಂದಿರೆ – ಲಕ್ಷ್ಮೀ
ಇಂಬಿದು – ಇಂಬಾಗಿ ಇಡು
ಇಂಬಿನೊಳ್ – ಹೃದಯದಲ್ಲಿ
ಇಂಬು – ಹೆಚ್ಚಾಗಿ

ಉ

ಉಚ್ಛಿಷ್ಟ – ಎಂಜಲು
ಉತ್ಥಾನ ದ್ವಾದಶಿ–ಕಾರ್ತಿಕ ಶುದ್ಧ ದ್ವಾದಶಿ
ಉದಧಿ ಹಾರಿದವ – ಹನುಮಂತ
ಉದ್ದಂಡ – ಶ್ರೇಷ್ಠ
ಉದ್ದಂಡ – ಶೂರ
ಉದ್ದಂಡ – ದುಷ್ಟ
ಉಪಟಳ – ತೊಂದರೆ
ಉಮೆನಂದನ – ಗಣೇಶ
ಉರಗ – ಕಾಳಿಂಗ
ಉರಗ – ಶೇಷ
ಉರೋಜ – ಮೊಲೆ

ಊ

ಊಳಿಗ – ಸೇವೆ

ಋ

ಋಣತ್ರಯ – ಪಿತೃಋಣ, ಆಂತಾರ್ಯ ಋಣ, ದೇವ ಋಣ

ಎ

ಎನ್ನೂರಿಗೆ – ನನ್ನೂರಿಗೆ
ಎರಕ – ಸ್ನೇಹ
ಎರವು – ಸಾಲ
ಏಣ – ಗಂಡುಜಿಂಕೆ, ಚಂದ್ರ

ಒ

ಒಡ್ಡಿ – ಪಣಕ್ಕೆ ಹಚ್ಚಿ

ಕ

ಕಕ್ಕುಲತೆ – ಲೋಭ
ಕಕ್ಕುಲಾತಿ – ಪ್ರೀತಿ
ಕಟಿಸೂತ್ರ – ಸೊಂಟದ ಡಾಬು
ಕಡಹದ ಮರ– ಕದಂಬ ವೃಕ್ಷ
ಕಡೆಹಾಯಿಸು – ಪಾರುಮಾಡು
ಕದಪು – ಗಲ್ಲ
ಕತ್ರ – ಜೀವ
ಕರ್ತು – ಮಾಡುವವನು
ಕಪಟ – ಮೋಸ
ಕಪೋಲ – ಕೆನ್ನೆ
ಕಮಲ – ತಾವರೆ
ಕರ್ಮ – ಕೆಲಸದ ಫಲ
ಕರ್ಮಟದೂರ– ಕರ್ಮಾಸಕ್ತಿ ರಹಿತ
ಕರ್ಮ – ನಾಲ್ಕು ದೇವತೆಗಳ ಪೂಜೆ
ಕರಪತ್ರ – ಕರಗಸ
ಕರವ – ಕೈ
ಕರ – ಆನೆಯ ಸೊಂಡಿಲು
ಕರಡ – ಕಾಡಿನಲ್ಲಿ ಬೆಳೆದು ಒಣಗಿದ ಹುಲ್ಲು
ಕರುಣಾಲವಾಲ– ಕನಿಕರವುಳ್ಳವನು
ಕಲ್ಹಾರ – ತಾವರೆ ಜಾತಿಯ ಕಿರಿಯ ಹೂ
ಕಾಕುಮಾಡು – ತೊಂದರೆ ಕೊಡು
ಕಾಕು – ಕಿಡಿಗೇಡಿತನ

ಕಾಣಾಚಿ - ದ್ರವ್ಯ
ಕಾನನ - ಅಡವಿ
ಕಾಯ - ದೇಹ
ಕಾವೇರಿ
ಮಧ್ಯವಲಿ - ಶ್ರೀರಂಗದಲ್ಲಿ
ಕಾಳಗ - ಯುದ್ಧ
ಕಿನ್ನರ - ದೇವತೆಗಳ ಒಂದುವರ್ಗ
ಕುಂದ - ಬೆಟ್ಟ
ಕುಂಭ - ಕೊಡ, ಕಲಶ
ಕುಬ್ಜೆ - ಗೂನಿ
ಕುಯುಕ್ತಿ - ಕುತಂತ್ರ
ಕುಸುಮ - ಹೂವು
ಕುಹಕ - ಮೋಸಗಾರ
ಕೂರ್ಮ - ಆಮೆ
ಕುಕ್ಷಿ - ಹೊಟ್ಟೆ
ಕ್ಷುಧೆ - ಹಸಿವು
ಕೇಸರಿ - ಸಿಂಹ
ಕೇಸಕ್ಕಿ - ಕೆಂಪಾದ ಹಕ್ಕಿ
ಕೈವಲ್ಯ - ಮುಕ್ತಿ
ಕೋಳ - ಬಂಧನ
ಕೌಪೀನ - ಲಂಗೋಟಿ
ಕಂಜನಾಭ - ವಿಷ್ಣು
ಕಜಸಖ - ಸೂರ್ಯ
ಕಂಠಕ - ಸಾಮ
ಕಂತು - ಕಾಮ
ಕಂದರ - ಕೊರಳು
ಕಂದರ್ಪ - ಮನ್ಮಥ
ಕಂಬುಕಂಧರ - ಶಂಖದಂತೆ
ಕಂಬು - ಶಂಖಮುದ್ರೆ
ಕುಂಡಲ - ಕಿವಿಯ ಆಭರಣ
ಕುಂದಣ - ಅಪರಂಜಿ
ಕುಂಭಿನೀ - ಭೂಮಿ
ಕೊಂಡ - ಚಾಡಿ
ಕೌಸ್ತುಭ - ವಿಷ್ಣುವಿನ ಎದೆಯನ್ನು ಅಲಂಕರಿಸಿರುವ ಒಂದು ರತ್ನ

ಖ

ಖಂಡೆಯ - ಕತ್ತಿ
ಖಗ - ಪಕ್ಷಿ
ಖಗವರ - ಪಕ್ಷಿ ಶ್ರೇಷ್ಠ, ಗರುಡ
ಖತಿ - ಸಿಟ್ಟು
ಖಳನ ಅನುಜ- ದುಃಶಾಸನ
ಖುಲ್ಲ - ಸಂತೋಷ, ಮರ್ಜಿ, ವಿನೋದ

ಗ

ಗಗ್ಗರ - ಗೆಜ್ಜೆಗಳಿದ್ದಕಾಲಿನ ಆಭರಣ
ಗಜಚರ್ಮಾಂಬರ - ಗಜಚರ್ಮ ಧರಿಸಿದವನು
ಗಜ - ಕರಿರಾಜ
ಗರ - ದೆವ್ವ, ಭೂತ
ಗರಳ - ವಿಷ್ಣು
ಗಾಂಗೇಯ - ಭೀಷ್ಮಾಚಾರ್ಯನು
ಗಾಡಿಕಾರ - ಸುಂದರ
ಗಾಣ - ಎಣ್ಣೆಯನ್ನು ತೆಗೆಯುವ ಯಂತ್ರ
ಗಾರುಡ - ಮೋಡಿ ವಿದ್ಯೆ

ಗಾಸಿ – ತೊಂದರೆ
ಗುಪ್ತ – ಗುಟ್ಟು
ಗೋಪಿ – ಯಶೋಧೆ
ಗೊಣಸು – ಹಸುಗಳು ಎತ್ತು ಮುಂತಾದವುಗಳ ಆಭರಣ

ಘ

ಘೃತ – ತುಪ್ಪ
ಘನಸಾರ – ಶ್ರೀಗಂಧ
ಘಟಿ – ಗಳಿಗೆ
ಘುಂಘುರ – ಗೆಜ್ಜೆ, ಕಿರುಗಂಟೆ

ಚ

ಚಕ್ರಧರ – ವಿಷ್ಣು
ಚಕೋರ – ಬೆಳದಿಂಗಳನ್ನು ಸೇವಿಸಿ ಬದುಕುವುದೆಂದು ನಂಬಲಾಗಿರುವ ಪಕ್ಷಿ
ಚರಿಯ – ನಡತೆ
ಚಾಕುಳ – ನಾಲ್ಕು ಮುತ್ತಿನಿಂದ ಮಾಡಿದ ಕಿವಿಯ ಆಭರಣ
ಚಾರರು – ರಾಜಧೂತರು
ಚಿತ್ತಜ – ಕಾಮ
ಚೋದ್ಯ – ಆಶ್ಚರ್ಯ, ಸೋಜಿಗದ ವಿಷಯ

ಜ

ಜನಕಜಾ – ಸೀತೆ
ಜಲಜರ – ಮತ್ಸ್ಯಾವತಾರ
ಜಲಜಲೋಚನ– ವಿಷ್ಣು
ಜಲಧಿ – ಗಂಗಾನದಿ
ಜಾಗರ – ರಾತ್ರಿಯಲ್ಲಿ ಎಚ್ಚರವಿದ್ದು ಹರಿನಾಮಸ್ಮರಣೆ ಮಾಡುವುದು
ಜಾಗುಮಾಡದೆ– ತಡಮಾಡದೆ
ಜಾರ – ವ್ಯಭಿಚಾರಿ
ಜಿಹ್ವೆ – ನಾಲಿಗೆ

ಟ

ಟವಳಿ – ಮೋಸ
ಟಾಳಿ – ಮೋಸ

ಡ

ಡಂಬಕ – ಆಡಂಬರದವ
ಡಾಳ – ಪುಕಾರ
ಢಾಳಿಸು – ಬೀಸು
ಡಿಂಗರಿಗ – ಭಕ್ತ

ತ

ತಳಿರು – ಚಿಗುರು
ತ್ರಿಜಗ – ಮೂರು ಲೋಕ
ತಿರುಪೆ – ಭಿಕ್ಷೆ
ತುಂಬಿ – ಜೇನು ಹುಳು
ತುರು – ಆಕಳು
ತೃಷ್ಟಿ – ತೃಪ್ತಿ
ತೊಡರು – ಸರಪಳಿ
ತೊಂಡ – ಭಕ್ತ, ಸೇವಕ
ತೋಯಜಾಕ್ಷ – ವಿಷ್ಣು

ದ

ದಂತವಕ್ತ್ರಕ - ಹಲ್ಲಿನ ಮುಖ

ದಧಿ - ಮೊಸರು

ದರ - ಶಂಖ, ಕಂಬು

ದ್ವಯಸಾಕ್ಷಿ - ಎರಡು ಕಣ್ಣು

ದಿನಪಸುತ - ಸೂರ್ಯಮಗ, ಯಮ

ದಿವಿಜ - ದೇವತೆ

ದಿಂಡೆಯರು - ತುಂಟ ಗೆಳೆಯರು

ದುರಿತ - ಪಾಪ

ದುರುಳ - ಕೆಟ್ಟವನು

ದೃಷ್ಟವ - ದೃಷ್ಟಾಂತ

ಧ

ಧುರ - ಕಾಳಗ

ಧೀನ - ನಮ್ರ, ಒಡವ

ನ

ನಕ್ರ - ಮೊಸಳೆ

ನಖ - ಉಗುರು

ನಗದ - ಬೆಟ್ಟ, ಒಡವೆ

ನವನೀತ - ಬೆಣ್ಣೆ

ನಳಿನಭವ - ಬ್ರಹ್ಮ

ನಳಿನ - ಕಮಲ

ನಳಿನಜಾಂಡ - ಬ್ರಹ್ಮಾಂಡ

ನೃಪತಿ - ಅರಸ

ನಾಸಿಕ - ಮೂಗು

ನಿಕಾಯ - ಗುಂಪು

ನಿಖಿಳ - ಎಲ್ಲ, ಸಕಲ

ನಿಗಮ - ವೇದ

ನಿಷ್ಕಪಟ - ಕಪಟನಿಲ್ಲದಿರುವುದು

ನಿರ್ಜನರು - ದೇವತೆಗಳು

ನಿರವದ್ಯ - ಪರಿಶುದ್ಧ,

ನಿವಾಳಿಸಿ - ದೃಷ್ಟಿ ದೋಷವನ್ನು ತೆಗೆ

ನೀರಜ - ಪರಿಶುದ್ಧ ಪಾಪ ರಹಿತ

ನೀಲ - ನೀಲಿ ರತ್ನ

ನೀಲಮೇಘಶ್ಯಾಮ - ವಿಷ್ಣು

ನೆಗಳು - ಮೊಸಳೆ

ನೆಗಳು - ಅಜ್ಞಾನ

ನೃಪರ - ಗೆಜ್ಜೆ

ನೊಸಲು - ಹಣೆ

ಪ

ಪಟ್ಟವಾಳಿ - ರೇಷ್ಮೆಯ ಸೀರೆ

ಪಡಿ - ದಿನ ನಿತ್ಯದ ಆಹಾರ ಪದಾರ್ಥ

ಪಣೆ - ಹಣೆ, ನೊಸಲು

ಪತಿವ್ರತಾ - ಗರತಿ

ಪಥ - ದಾರಿ

ಪದ್ಮನಾಭ - ಹರಿ

ಪನ್ನಗ - ಕಾಲೀಯ ಸರ್ಪ

ಪವನಜ - ಆಂಜನೇಯ

ಪರ - ಶ್ರೇಷ್ಠ

ಪರಮೇಷ್ಠಿ - ಬ್ರಹ್ಮ

ಪರಾಕು - ಎಚ್ಚರಿಕೆ, ಅಲಕ್ಷ್ಯ

ಪರಿ - ಸ್ಥಾನ

ಪಸುಗೆ - ಭಾಗ

ಪಕ್ಷೀಂದ್ರ ವಾಹನ - ವಿಷ್ಣುವಿನ ವಾಹನ

ಪಾತಕ - ಪಾಪ, ದೋಷ
ಪಾತಕಿ - ಪಾಪ ಮಾಡಿದವರು
ಪಾಯ - ಪಾದ
ಪಾವಕ - ಅಗ್ನಿ
ಪಾರಿಣೆ - ಉಪವಾಸ ಮುರಿಯುವುದು
ಪಾಲನ - ರಕ್ಷಿಸುವುದು
ಪುಂಡರೀಕಾಕ್ಷ - ಬಿಳಿಯ ತಾವರೆ
ಪುನಗು - ಒಂದು ಜಾತಿಯ ಸುಗಂಧಿ ದ್ರವ್ಯ
ಪುರುವ - ಒಬ್ಬ ಹನುಮಂತ
ಪುಷ್ಕರಣೆ - ಕೊಳ
ಪೋಕ - ನಿಷ್ಪ್ರಯೋಜಕ
ಪುಸ್ತ - ಭೋಜನ ಕೂಟ
ಪ್ಲವಗ - ಕಪಿ
ಪಂಕ - ದೋಷ, ಪಾಪ
ಪಂಕಜ - ತಾವರೆ, ವಿಷ್ಣು
ಪಂಚಭೇದ - ಜೀವ ಈಶ್ವರ ಭೇದ
ಪೆಂಡೆಯ - ವೀರ ಪೆಂಡೆಯ
ಪುಂಡರೀಕ - ಕಮಲ

ಫ

ಫಣಿ ಫಣಿ - ಶೇಷ
ಫಣಿ ಫಣಿ - ಹಾವಿನ ಹೆಡೆ
ಫಣಿ - ಹಾವು
ಫುಲ್ಲ - ಹೂ, ಅರಳು

ಬ

ಬನ್ನ - ಕಷ್ಟ
ಬಾವುಗ - ಗಂಡು ಬೆಕ್ಕು
ಬಸಿರು - ಹೊಟ್ಟೆ
ಬಾಯ್ಬಡಿಕರು - ನಿಂದಕರು
ಬಿಂಕ - ಸೊಕ್ಕು
ಬಿಸಜ ಸಂಭವ- ಬ್ರಹ್ಮ
ಬೂಚಿ - ಬಾವಾ
ಬೈಗು - ಸಂಜೆ
ಬೊಮ್ಮ - ಭಿರಮಪ್ಪ (ಅನಿರುದ್ಧ)
ಬೋವ - ಸಾರಥಿ

ಭ

ಭವ - ಜನ್ಮ
ಭವ - ಶಿವ
ಭವಹಾರಿ - ಸಂಸಾರ ದು:ಖವನ್ನು ನಿವಾರಿಸುವ
ಭಾಗವತ - ಹರಿಭಕ್ತ
ಭಾಪುರ - ಭುಜಕೀರ್ತಿ
ಭಾವಜನಯ್ಯ - ಕಾಮನ ತಂದೆ, ಶ್ರೀ ಕೃಷ್ಣ
ಭಾರತೀಶ - ವಾಯುದೇವರು
ಭುಂಜಿಸು - ತಿನ್ನು, ಅನುಭವಿಸು
ಭೂಮಿಪತಿ - ಭೂದೇವಿ ರಮಣ , ವಿಷ್ಣು
ಭೂತೇಶ - ಶಿವ
ಭೂರಿ - ಹೆಚ್ಚಾದ
ಭಂಗಿಸು - ಅಪಮಾನ ಮಾಡು
ಭೋಗಿ - ಆದಿಶಯನ
ಭೋಗಿಶಯನನ ದಿನ - ಏಕಾದಶಿ

| | | |
|---|---|---|
| ಸುಳಿ | - | ತಿರುಗುಣಿ |
| ಸೂಕರ | - | ಹಂದಿ |
| ಸೂತ್ರ | - | ಜನಿವಾರ |
| ಸೂತಕ | - | ಜನನ ಮರಣಗಳಿಂದಾಗುವ ಮೈಲಿಗೆ |
| ಸೋಳಾ | - | ಹದಿನಾರು |

**ಹ**

| | | |
|---|---|---|
| ಹಗೆ | - | ಶತ್ರು |
| ಹರಿವಾಣ | - | ಅಗಲವಾದ ತಟ್ಟೆ |
| ಹವ್ಯ | - | ಅಗ್ನಿಗೆ ಆಹುತಿ ಕೊಡಲು ಯೋಗ್ಯವಾದುದು |
| ಹಸ್ತಿ | - | ಆನೆ |
| ಹಾಟಕಾಂಬರ | - | ಬಂಗಾರದ ಬಣ್ಣದ |
| ಹಿರಣ್ಯ | - | ಬಂಗಾರ |
| ಹೇಮ | - | ಸಂಪತ್ತು |
| ಹೇಮಾಂಬರ | - | ಪೀತಾಂಬರ |

**ಕ್ಷ**

| | | |
|---|---|---|
| ಕ್ಷೀರಸಾಗರ | - | ಸಪ್ತಸಾಗರಗಳಲ್ಲಿ ಒಂದು |

# ಅನುಬಂಧ – ೨

## ಪಾರಿಭಾಷಿಕ ಪದಗಳ ಅರ್ಥ

### ಅ

***ಅವಿದ್ಯೆಯ ಸಪ್ತ ಚರಣಗಳು*** : ೧. ರಜಸ್ಸು ೨. ಅಸ್ಮಿತಾ ೩. ತಮಸ್ಸು ೪. ಮೋಹ ೫. ಮಹಾದೇವಿ ೬. ತಾಮಿಸ್ರ ೭. ಅಂಧತಾಮಿಸ್ರ

***ಅಷ್ಟ ಭೋಗಗಳು*** : ೧. ಗೃಹ ೨. ಶಯ್ಯಾ ೩. ವಸ್ತು ೪. ಆಭರಣ ೫.ಸ್ತ್ರೀ ೬. ಪುಷ್ಪ ೭. ಗಂಧ ೮. ತಾಂಬೂಲ

***ಅಷ್ಟ ಮದಗಳು*** : ೧. ಕುಲಮದ ೨. ಧನಮದ ೩. ವಿದ್ಯಾಮದ ೪. ರೂಪಮದ ೫. ಅರ್ಥಮದ ೬. ಯೌವನಮದ ೭. ಅನ್ನದಮದ ೮. ಬಲದಮದ

***ಅಷ್ಟ ಮಹಿಷಿಯರು*** : ೧. ಧನ ೨. ಧಾನ್ಯ ೩. ವಾಹನ ೪.ವಾಸ್ತು ೫. ಪುತ್ರ ೬. ಮಿತ್ರ ೭. ಕಳತ್ರ ೮. ಭೃತ್ಯ

### ಆ

***ಆತ್ಮನ ಎಂಟು ಗುಣಗಳು*** : ೧. ಅಪಹತ ಪಾಪ್ಮಾ ೨. ವಿರಜ ೩. ವಿಮೃತ್ಯು ೪. ವಿಶೋಕ ೫. ವಿಜಘತ್ಸ ೬. ಅಪಿಹಾಸ ೭. ಸತ್ಯಕಾಮ ೮. ಸತ್ಯಸಂಕಲ್ಪ

• ಆರು ತೆರೆ = ಷಡ್ರಿಪುಗಳು : ಕಾಮ, ಕ್ರೋಧ, ಲೋಭ, ಮದ, ಮತ್ಸರ, ಮೋಹ

***ಆರು ಮಂದಿ ಕಳ್ಳರು*** : (ಅರಿಷಡ್ವರ್ಗಗಳು) ೧. ಕಾಮ ೨. ಕ್ರೋಧ ೩. ಲೋಭ ೪. ಮೋಹ ೫. ಮದ ೬. ಮತ್ಸರ

### ಎ

***ಎಂಬತ್ತು ನಾಲ್ಕು ಲಕ್ಷ ಯೋನಿಗಳು*** : ೧. ವೃಕ್ಷಾದಿಯೋನಿ ಇಪ್ಪತ್ತು ಲಕ್ಷ ೨. ಅಂಡಜ = ಸ್ವೇದ ಜಯೋನಿ ಹತ್ತು ಲಕ್ಷ ೩. ಕ್ರಿಮಿಯೋನಿ ಹನ್ನೊಂದು ಲಕ್ಷ

೪. ಜಲಜಯೋನಿ ಒಂಬತ್ತು ಲಕ್ಷ ೫. ಪಶ್ವಾದಿಯೋನಿ ಮೂವತ್ತು ಲಕ್ಷ ೬. ಮನುಷ್ಯ ಯೋನಿ – ನಾಲ್ಕು ಲಕ್ಷ.

ಜ

***ಜಲದೇವರು*** : ಹೆಣ್ಣು ಮಕ್ಕಳು ಬಸಿರಿದ್ದಾಗ ಅಥವಾ ಹಡೆದ ಮೇಲೆ ಈ ಜಲದೇವರ ಪೂಜೆ ನಡೆಯುತ್ತದೆ.

ಚ

***ಚತುರ ಯುಗಗಳು*** : ೧. ಕೃತಯುಗ ೨. ತ್ರೇತಾಯುಗ ೩. ದ್ವಾಪರ ಯುಗ ೪. ಕಲಿಯುಗ

***ಚಾಂದ್ರಾಯಣ*** : ಚಾತುರ್ಮಾಸ್ಯದ ಒಂದು ತಿಂಗಳಲ್ಲಿ ಪೌರ್ಣಿಮೆಯವರೆಗೆ ದಿನಾಲು ಒಂದೊಂದು ತುತ್ತಿನಂತೆ ಏರಿಸುತ್ತ ವದ್ಯ ಪ್ರತಿಪದೆಯಿಂದ ಅಮಾವಾಸ್ಯೆಯವರೆಗೆ ದಿನಾಲು ಒಂದೊಂದು ತುತ್ತಿನಂತೆ ಇಳಿಸುತ್ತ ಬರುವ ಒಂದು ವ್ರತ. ಇದು ಚಂದ್ರನ ಕಲೆಗಳನ್ನು ಅವಲಂಬಿಸಿದ ವ್ರತವಾದುದರಿಂದ ಇದಕ್ಕೆ ಚಂದ್ರಾಯಣ ವ್ರತವೆಂಬ ಹೆಸರು.

ತ

***ತೀರ್ಥ ಕ್ಷೇತ್ರಗಳು*** : ೧. ತಿರುಪತಿ ೨. ಕಂಚಿ ೩. ಶ್ರೀರಂಗ ೪. ಮನ್ನಾರುಗುಡಿ ೫. ಅನಂತಶಯನ ೬. ಸೇತು ೭. ಶ್ರೀಮುಷ್ಣ ೮. ಭದ್ರಾಚಲ ೯. ಕುಂಭಕೋಣ ೧೦. ಘಟಿಕಾಚಲ ೧೧. ಹಂಪಿ ೧೨. ಶ್ರೀರಂಗಪಟ್ಟಣ ೧೩. ಉಡುಪಿ ೧೪. ಮೇಲುಕೋಟೆ ೧೫. ಬೇಲೂರು ೧೬. ಮಳೂರು ೧೭.ತೊರವೆ ೧೮. ನಾಗಮಂಗಲ ೧೯. ಗದಗ ೨೦. ಕೂಡಲಿಪುರ ೨೧. ಹೊಳೆಹೊನ್ನೂರು

ದ

***ದಶಾವತಾರಗಳು*** = ೧. ಮತ್ಸ್ಯವತಾರ ೨. ಕೂರ್ಮವತಾರ ೩. ವರಾಹವತಾರ ೪. ನರಸಿಂಹ ಅವತಾರ ೫. ವಾಮನ ಅವತಾರ ೬. ಜಮದಗ್ನಿ ಅವತಾರ ೭. ರಾಮವತಾರ ೮. ಕೃಷ್ಣ ಅವತಾರ ೯. ಬುದ್ಧ ಅವತಾರ ೧೦. ಕಲ್ಕಿ ಅವತಾರ

# ದೇವತೆಗಳ ಹೆಸರುಗಳು

## (ತಾರತಮ್ಯ ಅವರೋಹಣ ಕ್ರಮವನ್ನನುಸರಿಸಿ)

೧. ಪರಮಾತ್ಮ, ಹರಿ, ವಿಷ್ಣು (ಸರ್ವೋತ್ತಮ, ಪುರಷ)

೨. ರಮಾದೇವಿ, ಮಹಾಲಕ್ಷ್ಮಿ (ಅವ್ಯಕ್ತತ್ತ್ವ, ಮೂಲಪ್ರಕೃತಿ)

೩. ಬ್ರಹ್ಮ ಮತ್ತು ವಾಯು (ಮಹತ್ತತ್ತ್ವ)

೪. ಸರಸ್ವತಿ ಅಥವಾ ಬ್ರಹ್ಮಪತ್ನಿ ಮತ್ತು ಭಾರತಿ ಅಥವಾ ವಾಯು ಪತ್ನಿ

೫. ಗರುಡ, ಶೇಷ ಮತ್ತು ರುದ್ರ (ಅಹಂಕಾರ ತತ್ವ) (ಮಹವವ್ಯಕ್ತ)

೬. ಕೃಷ್ಣನ ಷಣ್ಮಹಿಷಿಯರು : ನೀಲಾ, ಭದ್ರಾ, ಮಿತ್ರವಿಂದಾ, ಕಾಲಿಂದೀ, ಲಕ್ಷಣಾ, ಜಾಂಬವತೀ

೭. ಸೌಪರ್ಣಿ ಅಥವಾ ಗರುಡ ಪತ್ನಿ, ವಾರುಣೀ ಅಥವಾ ಶೇಷಪತ್ನಿ ಮತ್ತು ಪಾರ್ವತಿ ಅಥವಾ ರುದ್ರಪತ್ನಿ

೮. ಇಂದ್ರ ಮತ್ತು ಕಾಮ (ಮನಸ್ತತ್ತ್ವ)

೯. ಅಹಂಕಾರಿತ ಪಾಣ (ತೈಜಸಾಹಂಕಾರ, ತ್ವಗಿಂದ್ರಿಯ)

೧೦. ದಕ್ಷ (ಪಾಣೀಂದ್ರಿಯ) ಅನಿರುದ್ಧ ಅಥವಾ ಕಾಮಸೂತ್ರ ರತ್ನ ಅಥವಾ ಕಾಮಸೂತ್ರ, ರತಿ ಅಥವಾ ಕಾಮ ಪತ್ನಿ, ಸ್ವಾಯಂಭುವಮನು (ಉಪಸ್ಥೇಂದ್ರಿಯ)

೧೧. ಪ್ರವಹ ವಾಯು (ವಾಯು ತತ್ವ, ಭೂತವಾಯು)

೧೨. ಸೂರ್ಯ (ಚಕ್ಷುರಿಂದ್ರಿಯ, ಶತರೂಪ ಅಥವಾ ಸ್ವಾಯಂಭುವ, ಮನುಪತ್ನಿ, ಚಂದ್ರ (ಶ್ರೋತ್ರೇಂದ್ರಿಯ), ಮತ್ತು ಯಮ

೧೩. ವರುಣ = (ಅಪತತ್ತ್ವ, ರಸನೇಂದ್ರಿಯ)

೧೪. ನಾರದ

೧೫. ಪ್ರಸೂತೀದೇವಿ, ಭೃಗು ಮತ್ತು ಪ್ರಧಾನಾಗ್ನಿ (ವಾಗಿಂದ್ರಿಯ, ತೇಜೋತತ್ತ್ವ)

೧೬. ಸಪ್ತರ್ಷಿಗಳು, ಪ್ರಹ್ಲಾದ ಮತ್ತು ವೈವಸ್ವತಮನು

೧೭. ಮಿತ್ರ, ಪ್ರವಹೀದೇವಿ ಮತ್ತು ತಾರಾ ಎಂಬಿಬ್ಬರು ಬೃಹಸ್ಪತಿ ಪತ್ನಿಯರು ಮತ್ತು ರಕ್ಷೋಧಿನಾಥನಾದ ನಿರ್ಋತಿ(ಪಾಯ ಇಂದ್ರಿಯ)

೧೮. ವಿಷ್ವಕ್ಸೇನ, ಅಶ್ವಿನೀ ದೇವತೆಗಳು (ಘ್ರಾಣೇಂದ್ರಿಯ), ಗಣಪತಿ (ಆಕಾಶತತ್ತ್ವ) ಕುಬೇರ ಮತ್ತು ಶತದೇವತೆಗಳು.

- (ಕಂಸದಲ್ಲಿ ಅವರು ಪ್ರತಿನಿಧಿಸುವ ತತ್ವಗಳನ್ನು ಸೂಚಿಸಿದೆ)

ನ

*ನದಿಗಳ ಹೆಸರುಗಳು* : ೧.ಕಾಳಿಂದಿ ೨. ಕೃಷ್ಣವೇಣಿ ೩ ತ್ರಿವೇಣಿ ೪ ಪಂಚಗಂಗೆ ೫.ಭಾಗೀರಥಿ ೬.ಗಂಗೆ ೭.ಯಮುನೆ

*ನವವಿಧ ಭಕ್ತಿ* : ೧.ಆರ್ತವೈರಾಗ್ಯ ೨. ಮುಮುಕ್ಷ ೩. ವ್ಯಾಕುಲ ೪.ಶಾಂತ ೫. ದಾಸ್ಯ ೬.ಸಖ್ಯ ೭.ವಾತ್ಸಲ್ಯ ೮. ಮಧುರ ೯. ಸಮರ್ಪಣ

*ನವರಂಧ್ರಗಳು* : ಎರಡು ಕಣ್ಣು + ಎರಡುಕಿವಿ + ಎರಡು ಮೂಗಿನ ಹೊರಳೆಗಳು + ಒಂದು ಬಾಯಿ + ಒಂದು ಗುದ + ಒಂದು ಉಪಸ್ಥ = ಒಂಬತ್ತು

**ನಾಲ್ಕು ಭ್ರಮೆಗಳು** : ೧.ಸ್ವಾತಂತ್ರ್ಯ ಭ್ರಮೆ ೨. ಐಕ್ಯಭ್ರಮೆ ೩. ಕರ್ತೃತ್ವ ಭ್ರಮೆ ೪. ಭೋಕ್ತೃತ್ವ ಭ್ರಮೆ

**ನಾಲ್ಕು ಸಾಧನೆಗಳು** : ೧.ಹರಿಕಥಾಶ್ರವಣ ೨. ಮನನ ೩. ಧ್ಯಾನ ೪. ಭಕ್ತಿ

**ನುಡಿ ಎರಡಾಗು** : ಕೊಟ್ಟ ಮಾತಿಗೆ ತಪ್ಪು, ಸುಳ್ಳಾಡು

**ನೂತನವೇಕಿನ್ನೂ** : ನೀನು ಇದನ್ನು ಅರಿಯದವನೆ?

ಪ

*ಪರಿಪೂರ್ಣ* : ಪೂರ್ಣ ಮದಃ, ಪೂರ್ಣಮಿದಂ ಪೂರ್ಣಾತ ಪೂರ್ಣ ಮುಧಿಚ್ಚತೆ, ಪೂರ್ಣಮೇವಾ ವಶಿಷ್ಯತೆ (ಈಶಾವಾಸ್ಯ)

*ಪಕ್ಷ ಪ್ರಾಯಶ್ಚಿತ್ತ* –ಹದಿನೈದು ದಿವಸಗಳಿಗೊಮ್ಮೆ ಮನದ ಶುದ್ಧೀಕರಣಕ್ಕಾಗಿ ಮಾಡುವ ವ್ರತ

*ಪಂಚ ಕರಣಾರ್ಥಗಳು* –೧. ರೂಪ ೨. ಶಬ್ದ ೩. ರಸ ೪. ಗಂಧ ೫. ಸ್ಪರ್ಶ

*ಪಂಚ ಭೂತಗಳು* –೧.ನೆಲ ೨. ನೀರು ೩. ಬೆಂಕಿ ೪. ಗಾಳಿ ೫.ಆಕಾಶ

*ಪಂಚ ಭೇದಗಳು* –೧.ಜೀವ – ಜೀಕ್ಕೆಭೇದ ೨. ಜೀವ ಜಡಕ್ಕೆಭೇದ ೩. ಜಡ ಜಡಕ್ಕೆ ಭೇದ ೪. ಜೀವ ಈಶರಿಗೆ ಭೇದ ೫. ಜಡಈಶರಿಗೆ ಭೇದ

*ಪಂಚೇಂದ್ರಿಯಗಳು* : ೧. ಕಣ್ಣು ೨. ಕಿವಿ ೩. ಮೂಗು ೪. ನಾಲಗಿ ೫. ಚರ್ಮ

*ಪಾವನ* : ದೇವತೆಗಳ ಗುಡಿಗಳಿಗೆ ನಮಸ್ಕರಿಸಿದಂತಹ ತಲೆ ಪಾವನ

***ಪುರುಷಾರ್ಥಗಳು*** – ೧. ಧರ್ಮ ೨.ಅರ್ಥ ೩.ಕಾಮ ೪. ಮೋಕ್ಷ

ಮ

***ಮೇರು*** – ಭೂಮಿಯ ಕೇಂದ್ರ ಸ್ಥಾನದಲ್ಲಿರುವ ಪೌರಾಣಿಕ ಪರ್ವತ. ಇದು ಸುವರ್ಣಮಯವಾಗಿರುವುದೆಂದೂ ಇದರ ಸುತ್ತಲೂ ಎಲ್ಲ ಗ್ರಹಗಳು ತಿರುಗುತ್ತವೆಂದೂ ನಂಬಿಕೆ.

ರಾ

***ರಾಗಗಳ ಹೆಸರುಗಳು*** – ೧. ಆಹೇರಿ ೨. ಕಲ್ಯಾಣಿ ೩. ಕಾಂಬೋದಿ ೪. ಗುಂಡಕ್ರಿ ೫. ಗುಜ್ಜರಿ ೬. ಗುರ್ಜರಿ ೭.ತೋಡಿ ೮.ದೇಶಾಕ್ಷಿ ೯.ದೇಸಿ ೧೦.ನಾಟಿ ೧೧.ಪಾಡಿ ೧೨.ಪೂರವ ೧೩.ಪೂರವಿ ಕಲ್ಯಾಣಿ ೧೪. ಭೂಪಾಳಿ ೧೫.ಬೈರವಿ ೧೬.ಮಲಹರಿ ೧೭.ವರಾರವಿ ೧೮.ಮೋಘರಂಜನಿ ೧೯.ರಾಮಕ್ರಿ ೨೦.ವರಾಳಿ ೨೧.ವಸಂತ ೨೨.ಶಂಕರಾಭರಣ ೨೩. ಶ್ರೀರಾಗ ೨೪.ಸಾರಂಗ ೨೫.ಸಾವೇರಿ ೨೬.ಸಾಳಗ ೨೭.ಸೋರಟ

ವ

*ವಜ್ರ:– ಇಂದ್ರನ ಆಯುಧ*

ಪರ್ವತಗಳಿಗ ರೆಕ್ಕೆಗಳಿದ್ದುವೆಂದೂ ಅವು ಹಾರಿ ಹಾರಿ ಲೋಕಕ್ಕೆ ತೊಂದರೆ ಕೊಡತೊಡಗಿದಾಗ ಇಂದ್ರನು ತನ್ನ ವಜ್ರಾಯುಧದಿಂದ ಅವುಗಳ ರೆಕ್ಕೆಗಳನ್ನು ಕಡಿದು ಹಾಕಿದನೆಂತಲೂ ಪುರಾಣದ ಕಥೆಗಳು ಹೇಳುತ್ತವೆ. ರೆಕ್ಕೆಗಳು ಹೋದ ಮೇಲೆ ಪರ್ವತಗಳು ಅಚಲವಾದವು.

***ವಾದ್ಯಗಳು ಹೆಸರುಗಳು*** : ೧. ಕಿನ್ನರಿ ೨. ಕೊಂಬು ೩. ಕೊಳಲು ೪. ಝಂಪೆತಾಳ ೫.ತಾಳ ೬.ತುತ್ತುರಿ ೭.ದಂಡಿಗೆ ೮.ದುಂದುರ್ಭಿ ೯. ಮದ್ದಲೆ ೧೦.ಮೃದಂಗ ೧೧. ಮುರಲಿಗಾನ ೧೨.ಮೌರಿ ೧೩.ವೇಣು ೧೪.ಶಂಖ

***ವಿಷ್ಣು ಪಂಚಕ*** – ಪ್ರತಿ ತಿಂಗಳಲ್ಲಿಯೂ ಶುದ್ಧ ಮತ್ತು ವದ್ಯ ಏಕಾದಶಿ, ಹುಣ್ಣಿಮೆ, ಅಮವಾಸ್ಯೆ, ಮತ್ತು ಶ್ರವಣ ನಕ್ಷತ್ರಗಳಂದು ಉಪವಾಸ ಮಾಡುವ ಒಂದು ವೈಷ್ಣವ ವ್ರತ.

***ಷಡ್ದರ್ಶನಗಳು*** : ೧. ಸಾಂಖ್ಯ ೨. ಯೋಗ ೩.ನ್ಯಾಯ ೪. ವೈಶೇಷಿಕ ೫. ಮಿಮಾಂಸ ೫. ವೇದಾಂತ

***ಷಡುರಸ*** : ಆರು ರಸಗಳು – ಕಾರ, ಹುಳಿ, ಸಿಹಿ, ಉಪ್ಪು, ಕಹಿ, ಒಗರು

***ಸಪ್ತ ಋಷಿಗಳು*** : ೧.ವಿಶ್ವಾಮಿತ್ರ ೨. ಜಮದಗ್ನಿ ೩.ಭಾರದ್ವಾಜ ೪.ಗೌತಮ ೫.ಅತ್ರಿ ೬.ವಶಿಷ್ಠ ೭.ಕಶ್ಯಪ

***ಸಪ್ತ ಸಮುದ್ರಗಳು*** : ೧.ಲವಣ ೨.ಇಕ್ಷು ೩.ಸುರೆ ೪.ಸರ್ಪಿ ೫.ದಧಿ ೬.ಕ್ಷೀರ ೭.ಜಲ

***ಸಪ್ತ ಧಾತುಗಳು*** : ೧. ರಸ ೨.ರಕ್ತ ೩. ಮಾಂಸ ೪. ನೆಣ ೫.ಎಲುವು ೬.ಮಿದುಳು ೭.ವೀರ್ಯ

***ಸಪ್ತ ವ್ಯಸನಗಳು*** : ೧. ಸ್ತ್ರೀ ವ್ಯಸನ ೨.ಪಗಡೆ ವ್ಯಸನ ೩.ಬೇಟೆಯ ವ್ಯಸನ ೪.ಪಾನ (ಕುಡಿತ) ವ್ಯಸನ ೫.ವಾಕ್ ಪಾರುಷ (ಒರಟು ಮಾತು) ವ್ಯಸನ ೬. ಅರ್ಥ ವ್ಯಸನ ೭. ದೂಷಣ ವ್ಯಸನ

***ಸಿರಿ ಮುದ್ರೆ*** : ವೈಷ್ಣವರು ಧರ್ಮಾಧಿಕಾರ್ಯಕ್ಕಾಗಿ ದೇಹಕ್ಕೆ ಐದು ಮುದ್ರೆಗಳ (ಶಂಖ,ಚಕ್ರ, ಗದ, ಪದ್ಮ, ನಾರಾಯಣ) ಸಮೂಹ

***ಹದಿನೆಂಟು ಪುರಾಣಗಳು*** : ೧.ಬ್ರಾಹ್ಮ ೨.ಪಾದ್ಮ ೩.ವೈಷ್ಣವ ೪. ಶೈವ ೫. ಭಾಗವತ ೬.ನಾರದಿಯ ೭.ಮಾರ್ಕಂಡೇಯದ ೮.ಆಗ್ನೇಯ ೯.ಭವಿಷ್ಯ ೧೦.ಬ್ರಹ್ಮವೈವರ್ತ ೧೧.ಲೈಂಗ ೧೨.ವರಾಹ ೧೩.ಸ್ಕಾಂದ ೧೪.ವಾಮನ ೧೫.ಕೌರ್ಯ ೧೬.ಮಾತ್ಸ ೧೭. ಗರುಡ ೧೮.ಬ್ರಹ್ಮಾಂಡ

***ಹರಿಸರ್ವಾಂಗೆ*** : ತನ್ನ ಸರ್ವಾಂಗದಲ್ಲಿಯೂ ಹರಿಮಯಳಾದವಳು

***ಹಾವಕಾಂಬರ*** : ಬಂಗಾರದ ಬಣ್ಣದ ಉಡುಪುಳ್ಳವ, ವಿಷ್ಣು,

***ಹೂವ ತರುವರ ಮನೆಗೆ ಹುಲ್ಲ ತರುವ*** :- ದೇವರು ತನ್ನ ಭಕ್ತರ ಮನೆಯಲ್ಲಿ ಆಳಾಗಿ ದುಡಿಯುವನು.

# ಅನುಬಂಧ – ೩

## ಟಿಪ್ಪಣಿಗಳು

### ೧. ಅಕ್ರೂರ

ಯದುಕುಲದ ಶ್ವಫಲ್ಕ ಮತ್ತು ಗಾಂಧಿನಿ ಇವರ ಮಗ. ಕಂಸನ ಎಂಟುಜನ ಮಂತ್ರಿಗಳಲ್ಲಿ ಒಬ್ಬ. ಕೃಷ್ಣನ ಭಕ್ತ. ಕಂಸನ ಅಪ್ಪಣೆಯಂತೆ ಬಲರಾಮ – ಕೃಷ್ಣರನ್ನು ಮಧುರೆಗೆ ಕರೆತರುವಾಗ ಯಮುನಾ ನದಿಯಲ್ಲಿ ಸ್ನಾನ ಮಾಡುತ್ತಿದ್ದನು. ಆಗ ಕೃಷ್ಣನ ದಿವ್ಯದರ್ಶನವಾಯಿತು.

### ೨. ಅನಂತ ಪದ್ಮನಾಭ

ಕೇರಳ ರಾಜ್ಯದ ತಿರುವಾಂಕೂರಿನ ರಾಜರ ಕುಲದೇವತೆಯಾಗಿದ್ದ ಅನಂತ ಪದ್ಮನಾಭ ದೇವಾಲಯ ತ್ರಿವೇಂದ್ರಮದಲ್ಲಿದೆ. ಅನಂತಶರ್ಮನೆಂತಲೂ, ಪದ್ಮನಾಭನೆಂತಲೂ ಈ ದೇವರಿಗೆ ಹೆಸರುಗಳಿವೆ. ಪುರಾಣ ಕಾಲದಿಂದಲೂ ಈ ಕ್ಷೇತ್ರ ಪ್ರಸಿದ್ಧವಾಗಿದೆ.

### ೩. ಅಷ್ಟಮುನಿಗಳು

ಮಧ್ವಾಚಾರ್ಯರು ತಾವು ಪ್ರತಿಷ್ಠೆ ಮಾಡಿದ ಕೃಷ್ಣನ ಪೂಜೆಯನ್ನು ಸರದಿಯಂತೆ ಮಾಡಲು ಮತ್ತು ತಮ್ಮ ಸಿದ್ಧಾಂತವನ್ನು ಪ್ರಚಾರ ಮಾಡಲು ಎಂಟು (೮) ಮಠಗಳನ್ನು ಕೃಷ್ಣಗುಡಿಯ ಆಧೀನದಲ್ಲಿ ಏರ್ಪಡಿಸಿದರು. ಅದಮಾರು, ಕಾಣಿಯೂರು, ಕೃಷ್ಣಪುರು, ಪುತ್ತಿಗೆ, ಪೇಜಾವರ, ಪಲಿಮಾರು, ಶೀರೂರು, ಸೋದೆ, ಇವೇ ಅಷ್ಟಮಠಗಳು ಈ ಮಠದ ಸ್ವಾಮಿಗಳು ಎರಡು ವರ್ಷಕ್ಕೊಮ್ಮೆ ಪರ್ಯಾಯ ಕ್ರಮದಲ್ಲಿ ಕೃಷ್ಣನ ಪೂಜೆಯನ್ನು ಮಾಡುತ್ತಾರೆ. ಒಂದು ಮಠದ ಸ್ವಾಮಿಗಳು ಇನ್ನೊಂದು ಮಠದ ಸ್ವಾಮಿಗಳಿಂದ ಪೂಜೆಯ ಅಧಿಕಾರವನ್ನು ವಹಿಸಿಕೊಳ್ಳುವುದು. ಪರ್ಯಾಯೋತ್ಸವವೆನಿಸಿಕೊಳ್ಳುತ್ತದೆ.

### ೪. ಆಲುಮೇಲು ಮಂಗವತಿ

ಪದ್ಮಾವತಿಗೆ ತಮಿಳುನಾಡಿನಲ್ಲಿ ಆಲುಮೇಲು ಮಂಗಮ್ಮನೆಂದು ಕರೆಯುತ್ತಾರೆ. ಪದ್ಮಾವತಿಯ ಪತಿಯೇ ವೆಂಕಟೇಶ. ತಿರುಪತಿಯಿಂದ ಮೂರು ಮೈಲಿನ ಮೇಲೆ ತಿರುಚ್ಚಾನೂರು ಇದೆ. ಇದಕ್ಕೆ ಮಂಗಪಟ್ಟಣವೆಂಬ ಹೆಸರಿದೆ. ಇಲ್ಲಿಯ ಪದ್ಮಸರೋವರದ ದಂಡೆಯ ಮೇಲೆ ಪದ್ಮಾವತಿಯ ಮಂದಿರವಿದೆ.

### ೫. ಇಪ್ಪತ್ತೆಂಟು ಮೂರುತಿಗಳು

ಲಕ್ಷ್ಮೀನಾರಾಯಣ, ದಧಿವಾಮನ, ಐದುವ್ಯಾಸರು, ಮಳಲು ಮಟ್ಟಿಗೆ, ಮೂಲರಾಮ, ಮೂಲಸೀತೆ, ಐದು ಸುದರ್ಶನಗಳು ಎರಡು ಬಲಮುರಿ ಶಂಖಗಳು ಎರಡು ಬಾಣಗಳು, ಹಯಗ್ರೀವ, ಶ್ರೀಧರ, ದಿಗ್ವಿಜಯ ರಾಮ, ರಾಮವಂಕಿ ವರಹ, ಐದು ಚಕ್ರಾಂಕಿತಗಳು ಅಕ್ಷಯ ಪಾತ್ರೆ ಎಂದು ಒಕ್ಕಣಿಕೆಯಿದೆ.

### ೬. ಉರಗನ ಉಪವಾಸ

ಹಾವು ಒಮ್ಮೆ ಆಹಾರ ದೊರೆಕಿತೆಂದರೆ ಬಹುಕಾಲ ಉಪವಾಸವಿರುತ್ತದೆ. ಗಾಳಿಯನ್ನೇ ಕುಡಿದು ಜೀವಿಸುವದೆಂದೂ ಪ್ರತೀತಿ. ಆದರೆ ಅದರ ನಂಜೇನು ಕಡಿಮೆಯಾಗುವದಿಲ್ಲ. ಹಿಂಸಾಪ್ರವೃತ್ತಿಯೂ ಹೋಗುವುದಿಲ್ಲ. ಹಾವಿಗೆ ಉಪವಾಸದಿಂದ ಅದರ ಸಾತ್ವಿಕತೆ ಹೆಚ್ಚುವುದಿಲ್ಲ. ಹಾವಿಗೆ 'ಉಲರುಣಿ' ಎಂಬ ಹೆಸರೇ ಇದೆ. ಅಂದರೆ ಗಾಳಿಯೇ ಅದರ ಆಹಾರವಾದ್ದರಿಂದ ವಾಸ್ತವವಾಗಿ ಅದು ಉಪವಾಸ ಮಾಡಿದಂತಾಗುವುದಿಲ್ಲ.

### ೭. ಎಂಬತ್ತು ನಾಲ್ಕು ಯೋನಿಗಳು

ಪುರಾಣಗಳಲ್ಲಿ ಬರುವ ಎಣಿಕೆ ವೃಕ್ಷಾದಿಯಾಗಿ ಇಪ್ಪತ್ತು ಲಕ್ಷ, ಅಂಡಜ – ಸ್ವೇದಜಯೋನಿ ಹತ್ತು ಲಕ್ಷ. ಕ್ರಿಮಿಯೋನಿ ಹನ್ನೊಂದು ಲಕ್ಷ, ಜಲಜಯೋನಿ ಒಂಬತ್ತು ಲಕ್ಷ, ಪಶ್ವಾದಿಯಾಗಿ ಮೂವತ್ತು ಲಕ್ಷ, ಮನುಷ್ಯಯೋನಿ ನಾಲ್ಕು ಲಕ್ಷ, ಒಟ್ಟು ಎಂಬತ್ತು ನಾಲ್ಕು ಲಕ್ಷಯೋನಿಗಳು, ಜೀವವು ಈ ಎಲ್ಲ ಯೋನಿಗಳಲ್ಲೂ ಒಂದು ಕಡೆಗೆ ಮನುಷ್ಯ ಯೋನಿಗಳಲ್ಲಿ ಹುಟ್ಟುವುದೆಂಬ ನಂಬಿಕೆ. ಪುರಂದರದಾಸರ "ಎಂದಿಗೆ ನಾ ನಿನ್ನ ಧನ್ಯಪಹೆನೂ" ಎಂಬ ಕಾಂಬೋದಿ ರಾಗದ ಕೃತಿಯಲ್ಲಿ ಈ ಎಣಿಕೆಯಿದೆ.

## ೮. ಅಂಕಿತವಿಲ್ಲದ ದೇಹ

ವೈಷ್ಣವರಲ್ಲಿ ತಪ್ತ ಮುದ್ರಾಂಕವೆಂಬ ಸಂಸ್ಕಾರವಿದೆ. ದೀಕ್ಷಾಕಾಲದಲ್ಲಿ ಗುರುವು ವಿಷ್ಣುವಿನ ಆಯುಧ ವಿಶೇಷವೂ, ಪ್ರತೀಕವೂ ಆದ ಚಕ್ರವನ್ನು ಮುದ್ರೆಯಾಗಿ ಬಳಸಿ ಅದನ್ನು ಬೆಂಕಿಯಲ್ಲಿ ಕಾಯಿಸಿ, ದೇಹದಲ್ಲಿ ಭುಜ, ಎದೆ, ಉದರಗಳ ಮೇಲೆ ಮಂತ್ರಪೂರ್ವಕವಾಗಿ ಒತ್ತುತ್ತಾನೆ. ಆದ್ದರಿಂದ ದೇಹ ಪವಿತ್ರವಾಯಿತೆಂದೂ, ಆಧ್ಯಾತ್ಮ ಸಾಧನೆಗೆ ಅವಕಾಶ ಒದಗಿತೆಂದೂ ಭಾವನೆ. ಇದನ್ನೇ "ಚಕ್ರಾಂಕನ"ವೆಂದೂ ಕರೆಯುತ್ತಾರೆ.

ಹರಿದಾಸ ದೀಕ್ಷೆಯಲ್ಲಿ ಮತ್ತೊಂದು ವಿವರವೂ ಸೇರುತ್ತದೆ. ಹರಿದಾಸ ನಾದವನು ಎಂದೂ ಹಂಸಕೀರ್ತನೆ ಮಾಡುತ್ತಲೇ ಇರಬೇಕಾದುದರಿಂದ ಗುರುವಿನಿಂದ ತಾನೇ ರಚಿಸುವ ಕವಿತೆಗಳಿಗೆ ನಿರ್ದಿಷ್ಟವಾದ ಒಂದು ಅಂಕಿತವನ್ನು ಪಡೆದುಕೊಳ್ಳುತ್ತಾನೆ. ಇದು ಕಾವ್ಯಾಂಕಿತ "ಪುರಂದರ ವಿಠಲ" ವೆಂಬುದು ದಾಸರಿಗೆ ಗುರುಗಳಿಂದ ದೊರೆತದ್ದು ದೀಕ್ಷೆಯ ಸಂದರ್ಭದಲ್ಲಿ.

## ೯. ಆಂಜನೆಯ

ಸುಮೇರಾ ದೇಶದ ರಾಜನಾದ ಕೇಸರಿ ಹಾಗೂ ಗೋತಮ ಕನ್ಯೆ ಅಂಜನಿ. ಇವರ ಮಗನೇ ಆಂಜನೇಯ. ವಾಯುವಿನ ಅಂಶದಿಂದ ಅಂಜನಿಯಲ್ಲಿ ಚೈತ್ರ ಶುದ್ಧ ಪೌರ್ಣಿಮೆಯ ದಿನ ಹುಟ್ಟಿದನು.

## ೧೦. ಕಾಡುಕಿಚ್ಚು ನುಂಗಿ

ಕೃಷ್ಣನ ಬಾಲಲೀಲೆಗಳಲ್ಲಿ ಒಂದು. ಗೋಕುಲದ ಗೋವಳರು ತಮ್ಮ ಹಸುಕರುಗಳನ್ನು ಮೇಯಿಸುತ್ತ ಈರ್ಷಿವೆಂಬ ಅಡವಿಗೆ ಹೋಗಲು, ಇದ್ದಕ್ಕಿದಂತೆ ಕಾಡುಕಿಚ್ಚು ಎದ್ದು ಗೋವಳರನ್ನು, ಹಸುಕರುಗಳನ್ನು ತೊಂದರೆಗೊಳಿಸಿದಾಗ ಕೃಷ್ಣನು ತನ್ನ ಯೋಗಶಕ್ತಿಯಿಂದ ಕಾಡಗಿಚ್ಚನ್ನು ನುಂಗಿ, ಅವರೆಲ್ಲರ ಪ್ರಾಣ ಉಳಿಸಿದನೆಂಬ ಕಥೆ ಭಾಗವತದ ದಶಮಸ್ಕಂದದಲ್ಲಿದೆ.

## ೧೧. ಕುಚೇಲ

ಸಾಂದೀಪಿನಿ ಮುನಿಗಳ ಬಳಿ ಬಲರಾಮ ಕೃಷ್ಣರೊಂದಿಗೆ ಸಹಪಾಠಿ ಯಾಗಿದ್ದನು. ಕೃಷ್ಣನ ಬಾಲ್ಯಸ್ನೇಹಿತ ಇವನಿಗೆ ಸುಧಾಮನೆಂದೂ ಹೆಸರು. ವಿದ್ಯಾಭ್ಯಾಸ ಮುಗಿದ ಮೇಲೆ ಇವನು ಗೃಹಸ್ಥನಾಗಿ, ಬಡತನದಲ್ಲಿ ಬಾಳುತ್ತಿದ್ದ. ಆಗ ದ್ವಾರಕೆಯ ದೊರೆ ಶ್ರೀಕೃಷ್ಣನನ್ನು ಕಾಣಲು ಹೋದಾಗ ಒಂದು ಹಿಡಿ ಅವಲಕ್ಕಿಯಷ್ಟನ್ನೇ ಉಪಹಾರವಾಗಿ ಕೊಂಡೊಯ್ದನು. ಅಷ್ಟಕ್ಕೆ ಕೃಷ್ಣನು ತೃಪ್ತಿಪಟ್ಟು, ಅವನಿಗೆ ಸಕಲೈಶ್ವರ್ಯವನ್ನು ಅನುಗ್ರಹಿಸಿದನೆನ್ನುವ ಸಂದರ್ಭ

## ೧೨. ಕುಲಶ

ಕುಲಶವೆಂದರೆ ವಜ್ರಾಯುಧ. ಮೊದಲಿಗೆ ಬೆಟ್ಟಗಳಿಗೆ ರೆಕ್ಕೆಗಳಿದ್ದವೆಂದೂ, ಅವು ಹಾರಾಡುತ್ತ ದೇವಲೋಕ, ಭೂಲೋಕಗ ನಿವಾಸಿಗಳಿಗೆ ಉಪದ್ರವ ಕೊಡುತ್ತಿದುದ್ದರಿಂದ, ಇಂದ್ರನು ತನ್ನ ವಜ್ರಾಯುಧದಿಂದ ಅವುಗಳ ರೆಕ್ಕೆಗಳನ್ನು ಕತ್ತರಿಸಿದನೆಂದೂ, ಅಂದಿನಿಂದ ಅವು ಅಚಲವೆನಿಸಿಕೊಂಡುವೆಂದೂ ಕಥೆ.

## ೧೩. ಕೌಸ್ತುಭ

ಇದು ಅನರ್ಘ್ಯ ರತ್ನ. ದೇವದಾನವರು ಸಮುದ್ರ ಮಂಥನ ಮಾಡುವಾಗ ಈ ರತ್ನ ದೊರಕಿತು. ಇದನ್ನು ದೇವತೆಗಳು ಶ್ರೀಹರಿಗೆ ಸಮರ್ಪಿಸಿದರೆಂದು ಹೇಳಲಾಗಿದೆ.

## ೧೪. ಕಂಚೀವರದರಾಜ

ಚೆಂಗಲಪೇಟ್ – ಆರ್ಕೋಣಮ್ ರೇಲ್ವೆ ದಾರಿಯ ಮೇಲಿರುವ ಕಾಂಚಿವರ ನಿಲ್ದಾಣದಿಂದ ೨೨ ಮೈಲು ದೂರದಲ್ಲಿ ಕಂಚಿಕ್ಷೇತ್ರವಿದೆ. ಈ ಕಂಚಿಕ್ಷೇತ್ರದಲ್ಲಿ ಶಿವ ಕಂಚಿ – ವಿಷ್ಣು ಕಂಚಿ ಎಂಬ ಎರಡು ಭಾಗಗಳಿವೆ. ವಿಷ್ಣು ಕಂಚಿಯಲ್ಲಿ ವರದರಾಜನ ಗುಡಿಯಿದೆ. ಪುರಾಣ ಕಾಲದಿಂದಲೂ ಇದು ಪವಿತ್ರಕ್ಷೇತ್ರ ಸ್ಥಳವಾಗಿದೆ.

## ೧೫. ಕಂಸ

ಯದುವಂಶದ ಉಗ್ರಸೇನನ ಮಗ. ದೇವಕಿಯ ಅಣ್ಣ. ಪೂರ್ವಜನ್ಮದಲ್ಲಿ ಇವನು ಕಾಲನೇಮಿಯೆಂಬ ರಾಕ್ಷಸನಾಗಿದ್ದನೆಂದು ಹೇಳಲಾಗಿದೆ. ಜರಾಸಂಧನ ಮಕ್ಕಳಾದ ಆಸ್ತಿ–ಪಾಸ್ತಿಯರನ್ನು ಇವನು ಮದುವೆಯಾಗಿದ್ದನು. ವಸುದೇವ ಇವನ ಪ್ರಧಾನಿ. ವಸುದೇವ – ದೇವಕಿಯರ ಎಂಟನೆಯ ಸಂತಾನದಿಂದ ತನಗೆ ಮರಣವೆಂಬುದನ್ನು ತಿಳಿದು ಅವರನ್ನು ಸೆರೆಯಲ್ಲಿಟ್ಟಿದ್ದನು. ಕೊನೆಗೆ ಕೃಷ್ಣನಿಂದಲೇ ಇವನು ಕೊಲ್ಲಲ್ಪಟ್ಟನು

## ೧೬. ಕುಂತಿ

ಯಾದವ ಕುಲದ ಶೂರ ರಾಜನ ಮಗಳು. ವಸುದೇವನ ತಂಗಿ. ಶೂರರಾಜನು, ತನ್ನ ಸೋದರತ್ತೆಯ ಮಗನಾದ ಕುಂತೀಭೋಜನಿಗೆ ಈಕೆಯನ್ನು ದತ್ತಕ ಕೊಟ್ಟಿದ್ದನು. ಪೃಥೆಯೆಂಬುದು ಇವಳ ಮೊದಲಿನ ಹೆಸರು. ಕುರುವಂಶದ ಪಾಂಡುರಾಜನೊಂದಿಗೆ ಇವಳ ಮದುವೆಯಾಯಿತು. ಪಾಂಡವರು– ಕುಂತಿಯ ಮಕ್ಕಳು.

## ೧೭. ಗಜೇಂದ್ರ ಮೋಕ್ಷ

ಅಗಸ್ತ್ಯ ಋಷಿಯ ಶಾಪದಿಂದ ಇಂದ್ರದ್ಯುಮ್ನನೆಂಬ ರಾಜನು ಆನೆಯಾಗಿಯೂ, ದೇವಲ ಋಷಿಯ ಶಾಪದಿಂದ 'ಹೂ ಹೂ' ಎಂಬ ಗಂಧರ್ವನು ಮೊಸಳೆಯಾಗಿಯೂ ಜನ್ಮವೆತ್ತಿದರೆಂದೂ, ಅವರಿಬ್ಬರಿಗೂ ಏಕಕಾಲದಲ್ಲಿ ಶಾಪ ವಿಮೋಚನೆಯಾಯಿತೆಂದು ಕಥಾ ಸಂದರ್ಭ.

## ೧೮. ಗೋಕರ್ಣದ ಲಿಂಗ

ಶಿವನ ಆತ್ಮಲಿಂಗವನ್ನು ಪಡೆಯಲು ಹೋದ ರಾವಣನು ಗಣಪತಿಯನ್ನು ಪೂಜಿಸದೇ ಗೋಕರ್ಣದಲ್ಲಿ ತಪಸ್ಸು ಮಾಡಿ ಶಿವಲಿಂಗ ಪಡೆದು ತಿರುಗಿ ಬರುತ್ತಿದ್ದುದನ್ನು ಕಂಡು ಶಿವನಿಗೆ ಅಸಮಾಧಾನವಾಯಿತು. ಶ್ರೀವಿಷ್ಣುವಿನ ಪ್ರೇರಣೆಯಿಂದ ಗಣಪತಿ ಬ್ರಹ್ಮಚಾರಿಯ ವೇಷಧರಿಸಿ ರಾವಣನ ಬಳಿ ಬಂದನು. ಮೂತ್ರಬಾಧೆಯಾಗಲು ರಾವಣನು ಶಿವಲಿಂಗವನ್ನು ಗಣಪತಿಯ ಕೈಯಲ್ಲಿ ಕೊಟ್ಟು ಹೋದನು. ಗಣಪತಿ ಅದನ್ನು ಹೊರಲಾರದೆ ಲಿಂಗವನ್ನು ಕೆಳಗಿಟ್ಟನು. ಅದೇ ಗೋಕರ್ಣದ ಲಿಂಗವಾಯಿತು.

## ೧೯. ಗೋವು ಮತ್ತು ವಿಪ್ರ

ಶ್ರೀ ಮಧ್ವಾಚಾರ್ಯರು ಹುಟ್ಟಿದಾಗ ಕೊನೆಗೆ ಕುಡಿಸಲು ಬೇಕಾದ ಹಾಲನ್ನು ಪೂರೈಸಲಿಕ್ಕೆ ಪೂರ್ವಾಲಯ ಭಟ್ಟರು ಶ್ರೀ ಮಧ್ವಾಚಾರ್ಯರ ತಂದೆಯವರಾದ ನಡ್ಡಂತಿಲ್ಲಾಯ ಭಟ್ಟರಿಗೆ ಒಂದು ಎಳಗಂದಿ ಆಕಳನ್ನು ದಾನಕೊಟ್ಟರು. ಅದರ ಫಲವಾಗಿ ಆ ಬ್ರಾಹ್ಮಣನು ಮಡಿದ ಬಳಿಕ, ತನ್ನ ಮಗನಿಗೆ ಮಗನಾಗಿ ಹುಟ್ಟಿಬಂದು ಮೋಕ್ಷಕ್ಕೆ ಕಾರಣನಾದ ತತ್ವ ಇಲ್ಲಿದೆ.

## ೨೦. ಘಟಿಕಾಚಲ

ಆಂಧ್ರಪ್ರದೇಶದ ಶೋಲಿಂಗರ ನಿಲ್ದಾಣದಿಂದ ಆರುಮೈಲು ದೂರದಲ್ಲಿದೆ. ಎದುರು ಬದುರಾಗಿರುವ ಎರಡು ಬೆಟ್ಟಗಳಲ್ಲಿ, ಒಂದರ ಮೇಲೆ ಶ್ರೀ ನರಸಿಂಹ ದೇವರ ದೇವಾಲಯವಿದ್ದರೆ ಮತ್ತೊಂದರ ಮೇಲೆ ಶ್ರೀ ಹನುಮಂತ ದೇವರ ಗುಡಿಯಿದೆ. ಇದೊಂದು ಪವಿತ್ರ ಕ್ಷೇತ್ರವಾಗಿದ್ದು, ದಾಸರು ಕ್ಷೇತ್ರಯಾತ್ರೆಗೆಂದು ಹೋದಾಗ ಇಲ್ಲಿಯ ಹನುಮಂತ ದೇವರನ್ನು ಕುರಿತು ಹಾಡಿದ್ದಾರೆ.

## ೨೧. ಜಗವೆಂಬೋ ಗಿಡ

ಸಂಸಾರದ ವೃಕ್ಷದ ಚಿತ್ರ ಅಥರ್ವಣ ಉಪನಿಷತ್ತಿನ "ದ್ವಾಸುಪರ್ಣ" ಎಂಬ ಕೃತಿಯ ಆಧಾರದಿಂದ ಈ ರೂಪಲತೆಯನ್ನು ಚಿತ್ರಿಸಿದ್ದಾರೆ. ಎರಡು ಕಣ್ಣುಗಳು ಈಶ, ಜೀವ, ಮೂರು ಬುಡ ತ್ರಿಗುಣ. ನಾಲ್ಕುರಸ, ಜೀವಾಭಿಮುಖನಾದ ಈಶನ ಗುಣಗಳು ಪೋರಕ ನಿಯಾಮಕ, ಸಾಕ್ಷೀಕ, ಉದ್ದಾರಕ, ಐದು ಪಂಚೇಂದ್ರಿಯಗಳು, ಆರು ಸ್ವರೂಪ ಅರಿಷಡ್ವರ್ಗ, ಏಳು ತೊಗಟೆ, ಸಪ್ತವ್ಯಸನ, ಎಂಟುಗರಿ, ಅಕ್ಷ ಒಂಬತ್ತು, ಹತ್ತು ಎಲೆ, ದಶೇಂದ್ರಿಯ ವೃತ್ತಿಗಳು, ಹಣ್ಣು ತಿನ್ನುವ ಹಕ್ಕಿ, ಜೀವ, ನೋಡುತ್ತಿರುವ ಹಕ್ಕಿ ಈಶ. ಎರಡು ಒಂದೇ ಕುಲವಲ್ಲ. ಈಶ ಸ್ವತಂತ್ರ ಜೀವ ಅಸ್ವತಂತ್ರ, ಜೀವವನ್ನೇ ಸ್ವತಂತ್ರ ಎಂದು ಬಗೆದರೆ ಕೆಡುಕು. ಮುಳ್ಳು ಕೊನೆಂದರೆ ಅಣು ಪರಿಮಾಣದ ಜೀವ, ಅದರ ಮೇಲೆ ಮೂರು ಕಲೆಗಳು, ಲಿಂಗದೇಹ, ಅನಿರುದ್ಧ ದೇಹ ಮತ್ತು ಸ್ಥೂಲ ದೇಹ. ಅಲ್ಲಿಗೆ ಬಂದ ಮೂವರು ಒಡ್ಡರು, ಅವಸ್ಥಾತ್ರಯಗಳು – ಬಾಲ್ಯ, ಯೌವ್ವನ, ಮುಪ್ಪು, ಬಾಲ್ಯ ಮತ್ತು ಮುಪ್ಪುಗಳಲ್ಲಿ ಜ್ಞಾನಶಕ್ತಿಗಳ ಕೊರತೆಯಿದ್ದು, ಕುಂಟರು– ಯೌವ್ವನದಲ್ಲಿ ವಿಷಯೋಪಭೋಗಗಳಿಂದಾಗಿ ಆಧ್ಯಾತ್ಮದ ಕಡೆ ಕಾಲು ಬರುವುದಿಲ್ಲ. ಯೌವ್ವನಾವಸ್ಥೆಯಲ್ಲಿ ಕೊಟ್ಟ ಮೂರು ಎಮ್ಮೆಗಳು ವರ್ಷತ್ರಿಯ ಮೊದಲ ಎರಡು ಎಷಣಗಳು ಆಧ್ಯಾತ್ಮ ಪ್ರತಿಬಂಧಿಗಳಾದ ಬರಡು ಎಮ್ಮೆಗಳು, ವಿತ್ತೇಷಣವನ್ನು ಸರಿಯಾಗಿ ಮಾಡಿದರೆ ಸಾಧನೆಗೆ ನೆರವಾಗುತ್ತದೆ.

## ೨೨. ಜನಕ

ಮಿಥಿಲಾನಗರದ ದೊರೆಯಾಗಿದ್ದ ಜನಕ, ಅಧ್ಯಾತ್ಮ ತತ್ತ್ವವನ್ನು ಬಲ್ಲವನು. ಅವನ ಆಸ್ಥಾನದಲ್ಲಿ ಯಾವಾಗಲು ತತ್ತ್ವಶಾಸ್ತ್ರವನ್ನು ಕುರಿತು ಜಿಜ್ಞಾಸೆ ನಡೆಯುತ್ತಲೇ ಇರುತ್ತಿತ್ತು. ಒಮ್ಮೆ ಹೀಗೆ ದಾರ್ಶನಿಕರೊಂದಿಗೆ ಸಂವಾದ ಮಾಡುತ್ತ ಕುಳಿತ್ತಿದ್ದಾಗ ಅವನ ವಿರಕ್ತಿಯನ್ನು ಚಿತ್ತಸ್ಥೈರ್ಯವನ್ನು ಪರೀಕ್ಷಿಸಲು ಮಿಥಿಲಾ ನಗರದಲ್ಲಿ ಬೆಂಕಿ ಬಿದ್ದಂತೆ ಋಷಿಗಳು ತೋರಿಸಿ ಅವನಿಗೆ ಈ ಸುದ್ದಿ ಮುಟ್ಟಿಸಲು ಜನಕನು ಒಂದಿಷ್ಟು ಉದ್ವೇಗಗೊಳ್ಳದೆ "ನನ್ನದೆಂಬುದೇನು ಸುಟ್ಟುಹೋಗಲಾರದು" ಎಂದು ಹೇಳಿದನಂತೆ. ಇಲ್ಲಿ ನನ್ನದೆಂದರೆ ಆತ್ಮಗುಣಗಳು ಅದಕ್ಕೆ ಹುಟ್ಟು – ಸಾವು ಮೊದಲಾದ ವಿಕಾರಗಳಿಲ್ಲವೆಂದು ಇಂಗಿತ.

## ೨೩. ಜರಾಸಂಧ

ಈತನು ಮಗಧ ದೇಶದ ಬ್ರಹದ್ರಥನೆಂಬ ರಾಜನ ಮಗನು. ಬ್ರಹ್ಮ–ಹರರ ವರವನ್ನು ಪಡೆದು ವಿಪ್ರಚಿತ್ತ ಜರಾಸಂಧನಾಗಿ ಹುಟ್ಟಿದ. ರಾಜಸೂಯ ಯಾಗಕಾಲದಲ್ಲಿ ಭೀಮನು ಕೃಷ್ಣನ ಸಂಗಡ ದಿಗ್ವಿಜಯಕ್ಕೆ ಹೊರಟು ಜರಾಸಂಧನನ್ನು ಕೊಂದನು. ಇವನಿಗೆ ಆಸ್ತಿ–ಪ್ರಾಸ್ತಿಯೆಂಬ ಇಬ್ಬರು ಹೆಣ್ಣುಮಕ್ಕಳಿದ್ದರು ಅವರನ್ನು ಕಂಸನಿಗೆ ಕೊಟ್ಟು ಮದುವೆ ಮಾಡಿದ್ದನು.

## ೨೪. ತಾಮ್ರಧ್ವಜ

ಮಣಿಪುರದ ರಾಜ ಮಯೂರಧ್ವಜನ ಮಗ. ಯುಧಿಷ್ಠಿರನು ಅಶ್ವಮೇಧಯಾಗ ಮಾಡುವಾಗ ಯಾಗದ ಕುದುರೆಯನ್ನು ಅಡ್ಡಗಟ್ಟಿ ಸೆಣಸಲು ಬಂದ ಅರ್ಜುನನ್ನು ಸೋಲಿಸಿದ. ಕೃಷ್ಣಾರ್ಜುನರು ಮೋಸದಿಂದ ಮಯೂರಧ್ವಜನ ಬಳಿ ಹೋಗಿ ಅವನು ತಾಮ್ರಧ್ವಜನ ಶರೀರವನ್ನು ಇಭ್ಭಾಗವಾಗಿ ಗರಗಸದಿಂದ ಕೊಯ್ಯುವಂತೆ ಮಾಡಿದರು.

## ೨೫. ತಾಮಸ ಪುರಾಣ

ಹದಿನೆಂಟು ಪುರಾಣಗಳಲ್ಲಿ ಸಾತ್ವಿಕವಾದವು ಆರು. ರಾಜಸವಾದವು ಆರು. ತಾಮಸವಾದವು ಆರು. ಕಡೆಯ ಗುಂಪಿಗೆ ಸೇರಿದ ಪುರಾಣಗಳು ದುಷ್ಟರಾದವರನ್ನು ಪ್ರಲೋಭಿಸಿ ಅವರನ್ನು ಅಧೋಲೋಕಕ್ಕೆ ತಳ್ಳುವುದು. ಜನರಲ್ಲಿ ಸಾತ್ವಿಕರು, ರಾಜಸರು, ತಾಮಸರು ಎಂದು ಮೂರು ವರ್ಗಗಳಿದ್ದು, ಮೂರು ಬಗೆಯ ಪುರಾಣಗಳು ಅವರಿಗೆ ವಿಹಿತವಾಗಿದೆ.

## ೨೬. ತುಲಸಿ

ಧರ್ಮಧ್ವಜ ಮತ್ತು ಮಾಧವಿ ಇವರ ಮಗಳು. ವಿಷ್ಣುವಿಗಾಗಿ ತಪಸ್ಸು ಮಾಡಿ ಅವನನ್ನು ಮದುವೆಯಾದಳೆಂದು ದೇವಿ ಭಾಗವತದಲ್ಲಿ ಹೇಳಲಾಗಿದೆ. ಕಾಡಿನ ಹೂವಿಗೂ ತುಳಸಿಯೆಂದು ಹೆಸರು.

## ೨೭. ತೃಣಾವರ್ತ

ಕಂಸನ ಅನುಚರರಲ್ಲಿ ಒಬ್ಬ ರಾಕ್ಷಸ. ಈತನಿಗೆ ಗಾಳಿ ಅಸುರನೆಂಬ ಹೆಸರಿದೆ. ಕಂಸನ ಪ್ರೇರಣೆಯಂತೆ ಬಲರಾಮ– ಕೃಷ್ಣರನ್ನು ಕೊಲ್ಲುವುದಕ್ಕೆ ಬಿರುಗಾಳಿಯಾಗಿ ಬಂದು ಹೊತ್ತುಕೊಂಡು ಹೋಗುತ್ತಿರುವಾಗ ಶ್ರೀಕೃಷ್ಣನು ಗರಿಮಾಸಿದ್ಧಿಯಿಂದ ಅವನ ಕುತ್ತಿಗೆಯ ಮೇಲೆ ಬಲವಾಗಿ ಗುದ್ದಿದನು. ಆಗ ತೃಣಾವರ್ತನು ಸತ್ತನು.

## ೨೮. ತ್ರಿವಿಕ್ರಮ

ವಾಮನಾವತಾರದಲ್ಲಿ ಬಲಿಚಕ್ರವರ್ತಿಯಿಂದ ಮೂರು ಹೆಜ್ಜೆಗಳನ್ನು ದಾನವಾಗಿ ಪಡೆದುಕೊಂಡು ಭೂಲೋಕ ಅಂತರಿಕ್ಷ, ಸ್ವರ್ಗಲೋಕಗಳನ್ನೆಲ್ಲ ತನ್ನ ಕಾಲಿನಿಂದ ಅಳೆದು ಬಲಿಯನ್ನು ಪಾತಾಳಲೋಕಕ್ಕೆ ಅಟ್ಟಿದವನು ವಿಷ್ಣು.

## ೨೯. ದಧೀಚಿ

ಒಬ್ಬ ಋಷಿ. ಭೃಗು ಮಹರ್ಷಿಯ ಮಗ. ಇಂದ್ರನಿಂದ ಮಧುವಿದ್ಯೆಯನ್ನು ಕಲಿತು ಅಶ್ವಿನಿ ದೇವತೆಗಳಿಗೆ ಹೇಳಿಕೊಟ್ಟ. ಇವನು ಸರಸ್ವತಿ ನದಿ ತೀರದಲ್ಲಿ ತಪಸ್ಸು ಮಾಡುತ್ತಿದ್ದಾಗ ದೇವತೆಗಳು ಬಂದು ತಮ್ಮ ಅಸ್ತ್ರಗಳನ್ನೆಲ್ಲ ಇವನಲ್ಲಿ ನ್ಯಾಸವಾಗಿ ಇಟ್ಟು ಹೋದರು. ಬಹು ಕಾಲದವರೆಗೂ ದೇವತೆಗಳು ಅಸ್ತ್ರಕ್ಕಾಗಿ ಬಂದಿರಲು ಅವೆಲ್ಲ ನನ್ನ ಮೂಳೆಗಳಲ್ಲಿ ಬೆರೆತು ಹೋಗಿವೆ. ನನ್ನ ಮೂಳೆಗಳನ್ನು ತೆಗೆದುಕೊಂಡು ವಿಶ್ವಕರ್ಮನಿಂದ ನಿಮಗೆ ಬೇಕಾದ ಅಸ್ತ್ರಗಳನ್ನು ಮಾಡಿಸಿಕೊಳ್ಳಿರಿ ಎಂದು ಹೇಳಿ ಯೋಗಬಲದಿಂದ ದೇಹತ್ಯಾಗ ಮಾಡಿದನು. ದೇವತೆಗಳು ಹಾಗೆಯೇ ಮಾಡಿದರು.

## ೩೦. ದಂಡಿಗೆ ಬೆತ್ತ

ನಡೆದಾಡುವಾಗ ನುಡಿಸಲು ಅನುಕೂಲವಾಗುವಂತೆ ಹೆಗಲಿನಿಂದ ಇಳಿಬೀಳಬಹುದಾದ ಒಂದು ತಂತಿವಾದ್ಯ ಸಣ್ಣ ತಂಬೂರಿ.

## ೩೧. ದೃಢಭಕ್ತ ಬಲಿ ಚಕ್ರವರ್ತಿ

ಸ್ವರ್ಗವನ್ನು ಆಳುತ್ತಿದ್ದ ದೈತ್ಯ ಚಕ್ರವರ್ತಿ ಆದರೆ ವಿಷ್ಣುಭಕ್ತ. ಇಂದ್ರನಿಗೆ ಮತ್ತೆ ಸ್ವರ್ಗವನ್ನು ದೊರಕಿಸಿಕೊಡುವ ಸಲುವಾಗಿ ವಿಷ್ಣುವು ಬಾಲಬ್ರಹ್ಮಚಾರಿಯಂತೆ ಬಂದು ಬಲಿಯಿಂದ ಮೂರು ಹೆಜ್ಜೆ ಭೂಮಿಯನ್ನು ದಾನವಾಗಿ ಬೇಡಿದುದು ವಾಮನಾವತಾರದ ಕಥೆ.

## ೩೨. ದ್ವಾರಕೆ

ಈ ನಗರವು ಇಂದಿನ ಗುಜರಾತದಲ್ಲಿದೆ. ಸುರೇಂದ್ರನಗರ – ಓಖಾ ರೇಲ್ವೆ ಹಾದಿಯ ಮೇಲೆ ದ್ವಾರಕಾ ನಿಲ್ದಾಣವಿದೆ. ಇಲ್ಲಿ ದ್ವಾರಕಾಧೀಶ ಮಂದಿರವಿದೆ. ಶ್ರೀ ಆದಿಶಂಕರಾಚಾರ್ಯರು ಇಲ್ಲಿ ಸಾಮವೇದ ಪೀಠವನ್ನು ಸ್ಥಾಪಿಸಿದರು. ಹೊಯ್ಸಳರು ತಮ್ಮ ರಾಜಧಾನಿಯನ್ನು ಸೌರಾಷ್ಟ್ರದಲ್ಲಿರುವ ದ್ವಾರಕೆಯೆಂದು ಕರೆದಿದ್ದಾರೆ.

## ೩೩. ದೂರ್ವಾಸ

ಅತ್ರಿ ಮಹರ್ಷಿ ಮತ್ತು ಅನಸೂಯಾ ಇವರ ಮಗ. ದತ್ತಾತ್ರೇಯನ ಸೋದರ. ಕಾಲಾಗ್ನಿ ರುದ್ರನ ಅಂಶದಿಂದ ಹುಟ್ಟಿದವನಾದುದರಿಂದ ಕ್ರೋಧಮೂರ್ತಿ. ಈ ಋಷಿಯು ಸನಕಾದಿ ಮುನಿಗಳ ಬಳಿ ಉಪದೇಶವನ್ನು ಪಡೆದವನು.

## ೩೪. ದ್ರೌಪದಿ

ಭಾರತೀದೇವಿಯ ಅವತಾರವಾದ ದ್ರೌಪದಿ ಸೋಮವಂಶದ ದ್ರುಪರಾಜನ ಮಗಳು. ಯಜ್ಞಕುಂಡದಲ್ಲಿ ಹುಟ್ಟಿದುದರಿಂದ ಇವಳು ಅಯೋನಿಜೆ. ಇವಳಿಗೆ ಕೃಷ್ಣೆಯೆಂಬ ಹೆಸರೂ ಇದೆ. ದ್ರೌಪದಿಗಾದ ಅಪಮಾನದ ಸೇಡು ತೀರಿಸಿಕೊಳ್ಳುವದಕ್ಕಾಗಿಯೇ ಭಾರತ ಯುದ್ಧವಾದದ್ದು ಇತಿಹಾಸವಾಗಿದೆ.

## ೩೫. ಧೂಪಾರತಿ

ನಿರ್ಯಾಸ, ಪರಾಗ, ಕಾಷ್ಠ, ಗಂಧ, ಮತ್ತು ಕೃತ್ರಿಮವೆಂಬ ಐದು ಜಾತಿಯ ಸುಗಂಧ ದ್ರವ್ಯಗಳನ್ನು ಸೇರಿಸಿ ಹೊಗೆ ಹೊರಡಿಸುವುದು 'ಧೂಪ' ವೆನಿಸಿಕೊಳ್ಳುತ್ತದೆ. ಇದಕ್ಕಾಗಿ ಗುಗ್ಗಲು, ಅಗುರು, ಉಶೀರ, ಶರ್ಕರ, ಮಧು, ಚಂದನ ಮೊದಲಾದ ಸಾಮಗ್ರಿಗಳನ್ನು ಬಳಸುತ್ತಾರೆ. ಹೀಗೆ ಧೂಪ ದೇವರೆದುರು ತೋರಿಸುವುದು ಪ್ರದಕ್ಷಿಣಾಕಾರವಾಗಿ ಸುತ್ತುವುದು ಧೂಪಾರತಿ.

## ೩೬. ನವ ಕನಕದ ಮಾಲೆ:

ರಾಮನ ಪಟ್ಟಾಭಿಷೇಕದ ಕಾಲದಲ್ಲಿ ಹನುಮಂತನು ಸಮುದ್ರದ ಜಲವನ್ನು ತಂದುದನ್ನು ಕಂಡು ಸಂತೋಷಪಟ್ಟ ಸೀತೆ, ಹನುಮಂತನ ಕೊರಳಿಗೆ ಬಂಗಾರದ ಹಾರವನ್ನು ಹಾಕಿದಳು. ಇದನ್ನು ದಾಸರು ನವ ಕನಕದ ಮಾಲೆಯೆಂದು ವರ್ಣಿಸಿದ್ದಾರೆ.

## ೩೭. ನೀಳಾ

ಕೃಷ್ಣನ ಷಣ್ಮಹಿಷಿಯರಲ್ಲಿ ಒಬ್ಬಳು. ದಕ್ಷಿಣ ದೇಶದ ವೈಷ್ಣವ ಸಂಪ್ರದಾಯದಲ್ಲಿ ವಿಷ್ಣುವಿಗೆ ಭೂ, ನೀಳಾ ಎಂಬಿಬ್ಬರು ದೇವಿಯರೆಂಬ ಕಲ್ಪನೆಯಿದೆ. ಗೋದಾದೇವಿಯೆಂಬುವಳು ನೀಳಾದೇವಿಯ ಅವತಾರ.

## ೩೮. ಪುರುಷೋತ್ತಮ

ಜಗನ್ನಾಥ ಪುರಿಯಲ್ಲಿರುವ ದೇವರಿಗೆ ಈ ಹೆಸರಿದೆ. ಪುರುಷೋತ್ತಮ ಪುರಿ. ಎಂತಲೂ ಈ ಊರಿಗೆ ಹೆಸರುಂಟು. ಈ ಕ್ಷೇತ್ರವು ಇಂದಿಗೂ ನೀಲಾಚಲ ಕ್ಷೇತ್ರವೆಂತಲೂ ಕರೆಯಲ್ಪಡುತ್ತದೆ. ಕಟಕದಿಂದ ೨೯ ಮೈಲು ದೂರದಲ್ಲಿ ಜಗನ್ನಾಥ ಪುರಿಯಿದೆ. ಸಂಸ್ಕೃತದ ಪ್ರಸಿದ್ಧ ಕವಿ ಜಯದೇವ ತನ್ನ ಗೀತಗೋವಿಂದವನ್ನು ಇಲ್ಲಿಯೇ ಬರೆದನೆಂದು ಪ್ರತೀತಿಯಿದೆ.

## ೩೯. ಪಂಚರಾತ್ರಾಗಮ

ಇದರ ಕರ್ತೃ ಮಹಿದಾಸ. ಇವನು ವಿಷ್ಣುವಿನ ಅವತಾರವೆಂದು ನಂಬಿಕೆ ಇದೆ. ಇದೊಂದು ವೈಷ್ಣವ ಆಚಾರ - ವಿಚಾರಗಳನ್ನು ವಿವರಿಸುವ ಪ್ರಮುಖವಾದ ಆಗಮ ಗ್ರಂಥ.

## ೪೦. ಪಂಢರಪುರ ವಿಠಲ

ಪಂಢರಪುರವು ಸೊಲ್ಲಾಪುರ ಜಿಲ್ಲೆಯಲ್ಲಿ ಬರುತ್ತದೆ. ಮಿರಜ್- ಲಾತೂರು ರೇಲ್ವೆ ದಾರಿಯ ನಡುವಿರುವ ಕುರುಡೇವಾಡಿ ನಿಲ್ದಾಣದಿಂದ ೩೩ ಮೈಲು ದೂರದಲ್ಲಿರುವ ಪ್ರಸಿದ್ಧ ಸ್ಥಳ. ಪುರಂದರದಾಸರ ಆರಾಧ್ಯ ದೈವವಾದ ವಿಠಲನು ಇಲ್ಲಿಯ ಮುಖ್ಯ ದೇವತೆ.

## ೪೧. ಪಾಂಚಜನ್ಯ

ಪಂಚಜನನೆಂಬ ರಾಕ್ಷಸನ ಅಸ್ಥಿಯಿಂದ ಮಾಡಿಕೊಂಡ ಶಂಖ. ಪಂಚಜನನು ಪ್ರಹ್ಲಾದನ ತಮ್ಮನಾದ ಸಂಹ್ಲಾದ ದೈತ್ಯನ ಮಗ. ಶಂಖರೂಪನಾಗಿ ಸಮುದ್ರದಲ್ಲಿ ಇರುತ್ತಿದ್ದ. ಶ್ರೀಕೃಷ್ಣನ ಗುರುವಾದ ಸಾಂದೀಪನಿಯ ಮಗನನ್ನು ಇವನು ಅಪಹರಿಸಿದ್ದನು. ಕೃಷ್ಣನು ಇವನನ್ನು ಕೊಂದನು.

## ೪೨. ಪಿಂಡಾಂಡ

ಜೀವರ ಕರ್ಮ. ಭೋಗಕ್ಕೆ ಸಿದ್ಧವಾದ ಶರೀರ. ಇಂದ್ರಿಯಗಳು, ಮನಸ್ಸು, ಪಂಚಪ್ರಾಣಗಳು, ಪಂಚಮಹಾಭೂತಗಳು, ಇವುಗಳಿಂದ ಕೂಡಿದ ಸ್ಥೂಲ, ಸೂಕ್ಷ್ಮಶರೀರಗಳು, ಕ್ಷೇತ್ರಜ್ಞನಾದ ಜೀವನಿಗೆ ಕ್ಷೇತ್ರಪ್ರಾಯವಾಗಿರುವುದು ಅನ್ನದಿಂದ ಬೆಳೆಯುವ ಅನ್ನಮಯ ಕೋಶವೇ ಮೊದಲಾದ ಐದು ಕೋಶಗಳುಳ್ಳದ್ದು.

ಹೊರಗಣ ಇಡೀ ಜಗತ್ತನ್ನು ಬ್ರಹ್ಮಾಂಡವೆಂದೂ ಅದರಿಂದ ಬೇರೆಯಾದ ಶರೀರವನ್ನು ಪಿಂಡಾಂಡವೆಂದೂ ಕರೆಯುವರು.

## ೪೩. ಪುಂಡಲೀಕ

ಪಂಡರಿಗೆಯೆಂಬಲ್ಲಿ ಪುಂಡಲೀಕನೆಂಬ ಭಕ್ತನು ವೃದ್ಧರಾದ ತನ್ನ ತಾಯಿ-ತಂದೆಯರಿಗೆ ಸ್ನಾನ ಮಾಡಿಸುತ್ತಿರುವಾಗ ಪರಮಾತ್ಮನು ತಾನಾಗಿ ಅಲ್ಲಿಗೆ ಬಂದನೆಂದೂ, ಪುಂಡಲೀಕನು ತನ್ನ ಮಾತಾಪಿತೃ ಸೇವೆಯನ್ನು ಕೈಬಿಡದೆ. ಅಲ್ಲೇ ಇದ್ದ ಪೆಟ್ಟಿಗೆಯೊಂದನ್ನು ದೇವರೆಡೆಗೆ ಸರಿಸಿ ತನ್ನ ಕೆಲಸ ಮುಗಿಯುವವರೆಗೆ ಅಲ್ಲಿ ನಿಂತಿರುವಂತೆ ಬೇಡಿಕೊಂಡನೆಂದೂ, ದೇವರು

ಅವನ ಶ್ರದ್ಧೆಗೆ ಮೆಚ್ಚಿ ಹಾಗೆಯೇ ಇಂದಿಗೂ ನಿಂತಿರುವನೆಂದೂ ಕಥೆ. ಪಂಡರಪುರದ ಪಾಂಡುರಂಗ ವಿಠ್ಠಲನು ಈಗಲೂ ಇಟ್ಟಿಗೆಯ ಮೇಲೆ ನಿಂತಿರುವಂತೆಯೇ ಇದೆ.

### ೪೪. ಬಕ

ಇವನು ಏಕಚಕ್ರನಗರದ ಅಧಿಪತಿ. ಅಲ್ಲಿ ವೇತ್ರವನದಲ್ಲಿರುತ್ತಿದ್ದನು. ಇವನ ಉಪಟಳ ಹೆಚ್ಚಾದಾಗ ಭೀಮನು ಮಲ್ಲಯುದ್ಧದಲ್ಲಿ ಇವನನ್ನು ಕೊಂದನು.

### ೪೫. ಬದರೀನಾರಾಯಣ

ಉತ್ತರ ಪ್ರದೇಶದಲ್ಲಿರುವ ಈ ಕ್ಷೇತ್ರವು ಹೃಷಿಕೇಶದಿಂದ ೧೬೮ ಮೈಲು ದೂರದಲ್ಲಿದೆ. ಪುರಾಣಕಾಲದಿಂದ ಪ್ರಸಿದ್ಧವಾದ ಈ ಕ್ಷೇತ್ರದಲ್ಲಿ ಬದರೀನಾರಾಯಣ ದೇವರ ಗುಡಿಯಿದೆ. ಹಿಂದುಸ್ಥಾನದ ಅತಿ ಪ್ರಾಚೀನ ಕ್ಷೇತ್ರಗಳಲ್ಲಿ ಇದು ಒಂದಾಗಿದೆ.

### ೪೬. ಬಿಂದುಮಾಧವ

ಉತ್ತರ ಪ್ರದೇಶದ ವಾರಣಾಸಿಯ ಪಂಚಗಂಗಾ ಘಾಟದ ಮೇಲೆ ಬಿಂದುಮಾಧವನ ಗುಡಿಯಿದೆ. ಬಿಂದುತೀರ್ಥದ ಮೇಲ್ಗಡೆಯಲ್ಲಿರುವುದರಿಂದ ಈ ದೇವರಿಗೆ ಬಿಂದುಮಾಧವನೆಂಬ ಹೆಸರು ಬಂದಿದೆ.

### ೪೭. ಬ್ರಹ್ಮಣ್ಯರು

ಇವರು ವ್ಯಾಸರಾಯರ ಆಶ್ರಮ ಗುರುಗಳು. ವ್ಯಾಸರಾಯರನ್ನು ಹುಟ್ಟಿದಂದಿನಿಂದ ಪಾಲನೆ – ಪೋಷಣೆ ಮಾಡಿದವರು. ಬಂಗಾರದ ತಳಿಗೆಯಲ್ಲಿ ಮಗುವನ್ನು ಪಡೆದ ಕಥೆಯನ್ನಿಲ್ಲಿ ಸ್ಮರಿಸಿಕೊಳ್ಳಬಹುದು.

### ೪೮. ಭಂಡಿ ಅನ್ನವನುಂಡನು

ಏಕಚಕ್ರಪುರದಲ್ಲಿ ಪಾಂಡವರು ಅಜ್ಞಾತವಾಸ ಮಾಡುವಾಗ ಭೀಮನು ಬಕಾಸುರನನ್ನು ಕೊಂದ ಸಂದರ್ಭದಲ್ಲಿ ಬಕಾಸುರನಿಗಾಗಿ ಗ್ರಾಮದವರು ಕಳುಹಿಸಿದ್ದ ಒಂದು ಭಂಡಿ ಅನ್ನವನ್ನು ಭೀಮನು ತಿಂದದ್ದು. ಅದರಿಂದ ಬಕಾಸುರ ಸಿಟ್ಟಿಗೆದ್ದುದು ಇಲ್ಲಿನ ಕಥೆ.

### ೪೯. ಮಥುರಾಪುರಿ

ಈ ಪಟ್ಟಣವು ಯಮುನಾ ನದಿಯ ದಂಡೆಯ ಮೇಲಿದೆ. ಪಶ್ಚಿಮ – ಮಧ್ಯ ಹಾಗೂ ಆಗ್ನೇಯ ರೇಲ್ವೆಗಳ ಕೂಡಲಿನಲ್ಲಿ ಮಥುರೆ ನೆಲಸಿದೆ. ಈ ನಗರದಲ್ಲಿ ಯಾದವ ವಂಶದ ವಜ್ರನಾಭನು ಶ್ರೀಕೃಷ್ಣನ ಜನ್ಮಸ್ಥಳದಲ್ಲಿ ಕಟ್ಟಿಸಿದ ಶ್ರೀ ಕೇಶವದೇವ ಮಂದಿರವನ್ನು ಕೆಡಹಿ ಔರಂಗಜೇಬನು ಮಸೀದಿ ಕಟ್ಟಿಸಿದ್ದಾನೆಂದು ತಿಳಿದುಬರುತ್ತದೆ.

### ೫೦. ಮಧ್ವರಾಯ

ಶ್ರೀ ಮಧ್ವಾಚಾರ್ಯರು ದ್ವೈತಮತ ಸಂಸ್ಥಾಪಕರು. ಇವರಿಗೆ ಮಧ್ವರಾಯ, ಸುಖತೀರ್ಥ, ಆನಂದತೀರ್ಥ, ಪೂರ್ಣಪ್ರಜ್ಞ, ಅಲವಬೋಧ, ಸರ್ವಜ್ಞ, ದಶಪ್ರಮತಿ ಎಂಬಿತ್ಯಾದಿ ಹೆಸರುಗಳಿವೆ.

### ೫೧. ಮಧುಸೂದನ

ಮಧುವೆಂಬ ರಾಕ್ಷಸನನ್ನು ಕೊಂದವನು. ಕಲ್ಪಾವಧಿಯಲ್ಲಿ ವಿಷ್ಣುವಿನ ಕಿವಿಯ ಕೊಳೆಯಿಂದ ಹುಟ್ಟಿದ ಇಬ್ಬರು ಅಸುರರಲ್ಲಿ ಒಬ್ಬ ಮಧು ಇನ್ನೊಬ್ಬ ಕೈಟಭ.

### ೫೨. ಮಲ್ಲಾರಿ

ಕಂಸನು ಬಲರಾಮ– ಕೃಷ್ಣರನ್ನು ಕೊಲ್ಲಲು ಕಳುಹಿಸಿದ ಚಾಣೂರ, ಮುಷ್ಟಕ ಎಂಬ ಮಲ್ಲರನ್ನು ಕೊಂದವನು. ಈ ಪದದಲ್ಲಿ ಕೃಷ್ಣನು ಮಲ್ಲರಿಬ್ಬರನ್ನು ಸೆಣಸಿಕೊಂಡ ವರ್ಣನೆಯಿದೆ. ಕಡೆಯ ನುಡಿಯಲ್ಲಿ ಕೃಷ್ಣನು ತನ್ನ ಸೋದರಮಾವನಾದ ಕಂಸನನ್ನು ಕೊಂದ ವಿವರವಿದೆ. ಕಂಸನು ಸೆರೆಯಲ್ಲಿಟ್ಟು ತಂದೆ ಉಗ್ರಸೇನನನ್ನು ಕೃಷ್ಣನು ಸೆರೆಯಿಂದ ಬಿಡಿಸಿ ಮತ್ತೆ ಮಥುರೆಯ ಅರಸನೆಂದು ನೇಮಿಸಿದುದನ್ನು ಹೇಳಿದೆ.

### ೫೩. ಮಾಹೇಂದ್ರ ವರಜ

ಮಾಹೇಂದ್ರನ ಅನುಜನೆಂದರೆ ಇಂದ್ರನ ತಮ್ಮನಾದ ಉಪೇಂದ್ರ. ಕಶ್ಯಪ ಅದಿತಿಯರ ಉದರದಲ್ಲಿ ಜನಿಸಿದ್ದರಿಂದ ಈತ ಇಂದ್ರನ ತಮ್ಮನಾದ. ಆದುದರಿಂದ ವಾಮನನಿಗೆ ಇಂದ್ರಾವರಜ, ಉಪೇಂದ್ರ ಎಂಬ ಹೆಸರುಗಳಿವೆ.

### ೫೪. ಮಳಿಮಂತ

ಈತ ಕುಬೇರನ ಸೇನಾಪತಿ. ಈತನಿಗೆ ಅಗಸ್ತ್ಯನ ಶಾಪವಿತ್ತು. ಪಾಂಡವರು ವನವಾಸದಲ್ಲಿದ್ದಾಗ ಹಿಮಪರ್ವತದ ಮೇಲಿರುವ ಕುಬೇರ ತೋಟಕ್ಕೆ ಹೋಗಿ ಅಲ್ಲಿದ್ದ

ಸೌಗಂಧಿತ ಪುಷ್ಪವನ್ನು ತರುವಾಗ ಭೀಮನಿಗೂ, ಇವನಿಗೂ ಕಾಳಗವಾಗಿ ಭೀಮನಿಂದ ಇವನು ಕೊಲ್ಲಲ್ಪಟ್ಟನು.

### ೫೫. ಮೋದಸೂಕರ

ಜಗತ್ತಿಗೆ ಆನಂದವನ್ನು ನೀಡಿದ ವರಾಹಾವತಾರದ ವರ್ಣನೆ. ಹಿರಣ್ಯಾಕ್ಷನು ಭೂಮಿಯನ್ನು ಕದ್ದೊಯ್ದು ಸಮುದ್ರದಲ್ಲಿ ಮುಳುಗಲು, ಪರಮಾತ್ಮನು ವರಾಹಾವತಾರ ತಾಳಿ, ಅವನನ್ನು ಕೊಂದು ಭೂಮಿಯನ್ನು ತಿರುಗಿ ತಂದನೆಂದು ಭಾಗವತ ಹೇಳುತ್ತದೆ.

### ೫೬. ಯಂತ್ರೋದ್ಧಾರಕ

ಹಂಪೆಯಲ್ಲಿರುವ ಪ್ರಾಣದೇವರ ಹೆಸರು. ಕಪಿಬಂಧಬದ್ಧ ವರ್ತುಲದಲ್ಲಿರುವ ಸಮಭುಜವುಳ್ಳ ಎರಡು ತ್ರಿಕೋಣಗಳ ನಟ್ಟನಡುವೆ ಈ ಮೂರ್ತಿಯನ್ನು ಪ್ರತಿಷ್ಠಾಪಿಸಿ ಸುತ್ತಲೂ ಬೀಜಾಕ್ಷರಗಳನ್ನು ಕೆತ್ತಿದ್ದಾರೆ.

### ೫೭. ರಮಾ

ಲಕ್ಷ್ಮಿದೇವಿಯೇ ರಮಾ, ಈಕೆ ವಿಷ್ಣುಪತ್ನಿ. ಉಳಿದ ದೇವತೆಗಳಿಗಿಂತ ಪರಮಾತ್ಮನ ಬಗೆಗೆ ಹೆಚ್ಚಿನ ಜ್ಞಾನ ಪಡೆದ ಈಕೆ ನಿತ್ಯಮುಕ್ತಳು. ಪರಮಾತ್ಮನಿಗೆ ಸಕಲ ಭೋಗಗಳನ್ನರ್ಪಿಸಿ ಆತನ ಸೇವೆಯಲ್ಲಿ ನಿರತಳಾದವಳು. ಪರಮಾತ್ಮನ ಆಜ್ಞೆಯಂತೆ ಸುಜೀವಿಗಳಿಗೆ ಕರ್ಮಾನುಸಾರ ಮಾನಸಿಕ ಆನಂದ ಸುಖಪ್ರದಳೂ ಆಗಿದ್ದಾಳೆ.

### ೫೮. ರಾಜಗೋಪಾಲ

ಮಾಯಾವರಮ್ಮಿನಿಂದ ತಿರುವಾರೂರಿಗೆ ಬರುವಾಗ ನಡುಮಂಗಲಮ್ ನಿಲ್ದಾಣ ಬರುತ್ತದೆ. ಅಲ್ಲಿಂದ ಮನ್ನಾರ ಗುಡಿಯವರೆಗೆ ಒಂದು ರೇಲ್ವೆ ಶಾಖೆಯಿದೆ. ಇದಕ್ಕೆ ದಕ್ಷಿಣ ದ್ವಾರಕೆಯೆಂದು ಹೆಸರು. ಇಲ್ಲಿಯ ಮುಖ್ಯ ದೇವಾಲಯವೇ ರಾಜಗೋಪಾಲಸ್ವಾಮಿಯದು. ಈ ಕ್ಷೇತ್ರಕ್ಕೆ 'ಮನ್ನಾರು' ಎಂಬ ಹೆಸರಿದೆ. ಈ ರಾಜಗೋಪಾಲ ಮೂರ್ತಿಯನ್ನು ಪುರಂದರದಾಸರು 'ಮನ್ನಾರು ಕೃಷ್ಣ' ಎಂದು ಕರೆದಿದ್ದಾರೆ.

### ೫೯. ರುಕ್ಮಿ

ರುಕ್ಮಿ ವಿದರ್ಭರಾಜನಾದ ಭೀಷ್ಮಕನ ಹಿರಿಯ ಮಗ. ರುಕ್ಮಿಣಿಯ ಸೋದರ, ಭೀಷ್ಮಕನ ಇತರ ಮಕ್ಕಳಾದ ರುಕ್ಮಕೇಶ, ರುಕ್ಮಬಾಹು, ರುಕ್ಮಮೂಲ, ರುಕ್ಮರಥ, ಇವರೆಲ್ಲರೂ

ರುಕ್ಮಿಣಿಯು ಕೃಷ್ಣನ್ನು ಮದುವೆಯಾಗಲು ಒಪ್ಪಿದರು. ಆದರೆ ರುಕ್ಮಿಯೊಬ್ಬ ವಿರೋಧಿಸಿ, ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಡಬೇಕೆಂದು ಹಟ ಹಿಡಿದ. ಮದುವೆಗೆ ಮುಂಚೆ ಗೌರೀ ಪೂಜೆಯ ನೆವದಿಂದ ರುಕ್ಮಿಣಿಯು ಊರ ಹೊರಗೆ ಬಂದಾಗ ರುಕ್ಮಿಣಿಯ ಕರೆಯಿಂದ ಕೃಷ್ಣನು ಅವಳನ್ನು ಕದ್ದೊಯ್ದನು.

## ೬೦. ವತ್ಸಾಸುರ

ಯಮುನಾ ನದಿಯ ತೀರದ ಮೇಲೆ ಬಲರಾಮ – ಕೃಷ್ಣ ಆಡುತ್ತಿರುವಾಗ ಒಬ್ಬ ಅಸುರನು ಬಂದು ಕರುವಿನ ರೂಪ ತಳೆದು ದನಗಳ ಮಂದೆಯೊಳೆಗೆ ಹೊಕ್ಕಾಗ ಇವನನ್ನು ಕೃಷ್ಣನು ಕೊಂದ ಕಥೆ ಭಾಗವತದ ದಶಮಸ್ಕಂದದಲ್ಲಿದೆ.

## ೬೧. ವಿಜಯೀಂದ್ರರು

ಕ್ರಿ.ಶ. ೧೫೧೪ರಿಂದ ೧೫೯೫ರ ಅವಧಿಯಲ್ಲಿದ್ದ ವಿಜಯೀಂದ್ರರು ಶ್ರೀ ವ್ಯಾಸರಾಯರ ಶಿಷ್ಯರು. ರಾಯರ ಮಠದ ಶ್ರೀ ಸುರೇಂದ್ರರು ತಮ್ಮ ಮಠಕ್ಕೆ ಇವರನ್ನು ಕೊಡಬೇಕೆಂದು ಕೇಳಲು ಶ್ರೀ ವ್ಯಾಸರಾಯರು ಒಪ್ಪಿ ಪುತ್ರಭಿಕ್ಷೆ ನೀಡಿದರು. ಶ್ರೀ ವಿಜಯೀಂದ್ರರು ಕ್ರಿ.ಶ. ೧೫೩೯ರಲ್ಲಿ ಆಶ್ರಮವನ್ನು ಸ್ವೀಕರಿಸಿ ಶ್ರೀ ರಾಯರ ಮಠದ ಸಿಂಹಾಸನಾರೂಢರಾದರು. ಗುರುಗಳಾದ ಶ್ರೀ ವ್ಯಾಸರಾಯರಂತೆ ಪ್ರಖ್ಯಾತ ವಿದ್ವಾಂಸರಾಗಿದ್ದು ಸಂಸ್ಕೃತದಲ್ಲಿ ೧೦೪ ಗ್ರಂಥಗಳನ್ನು ರಚಿಸಿದ್ದಾರೆ.

## ೬೨. ವಿಪ್ರಚಿತ್ತ

ಕಶ್ಯಪ ಮತ್ತು ದನೂ ಇವರ ಮಗನಾದ ವಿಪ್ರಚಿತ್ತ. ಹಿರಣ್ಯಕಶಿಪುವಿನ ತಂಗಿಯಾದ ಸಿಂಹಿಕೆಯನ್ನು ಲಗ್ನವಾಗಿದ್ದನು. ಈತನು ಹಿರಣ್ಯಕಶಿಪುವಿನ ಪಕ್ಷಕಟ್ಟಿ ದೇವತೆಗಳೊಂದಿಗೆ ಹೊಡೆದಾಡಿದನು.

## ೬೩. ವ್ಯಾಸದೇವರು

ಶ್ರೀ ವೇದವ್ಯಾಸರು ವಿಷ್ಣುವಿನ ಒಂದು ಸ್ವರೂಪ. ಇವರು ವೇದಗಳನ್ನು ಕ್ರಮಗೊಳಿಸಿ, ಬ್ರಹ್ಮಸೂತ್ರಗಳನ್ನು ರಚಿಸಿದರು. ಇದಲ್ಲದೆ ಇವರು, ಅಷ್ಟಾದಶ ಪುರಾಣ, ಮಹಾಭಾರತ, ಹರಿವಂಶ, ಭಾಗವತ ಗ್ರಂಥಗಳನ್ನು ರಚಿಸಿದ್ದಾರೆ. ಉತ್ತರಮೀಮಾಂಸಾ ಶಾಸ್ತ್ರದ ದರ್ಶನಕಾರರಾಗಿದ್ದಾರೆ.

### ೬೪. ಶಕಟ

ಈ ಅಸುರನು ಕೃಷ್ಣನನ್ನು ಕೊಲ್ಲಲು ಬಂದ ಬಲರಾಮನ ಭಂಟ. ಬಂಡಿಯ ರೂಪದಿಂದ ಬಂದ ಇವನನ್ನು ಕೃಷ್ಣನು ಅಂಗಾಲಿನಿಂದಲೇ ಒದ್ದು ಕೊಂದನಂತೆ.

### ೬೫. ಶಂಕಾಸುರ

ಹಯಗ್ರೀವನೆಂಬ ದೈತ್ಯನು ವೇದಗಳನ್ನು ಕದ್ದೊಯ್ಯಲು ಶ್ರೀ ಹರಿಯು ಅವನನ್ನು ಕೊಂದು, ವೇದಗಳನ್ನು ಉದ್ಧರಿಸಿದನೆಂದು ಭಾಗವತದಿಂದ ತಿಳಿದುಬರುತ್ತದೆ. ಇದೇ ಮತ್ಸ್ಯಾವತಾರದ ಕಥೆಯಾಗಿದೆ.

### ೬೬. ಶ್ರೀರಂಗನಾಯಕ

ತಿರುಚಿನಾಪಳ್ಳಿಯಿಂದ ಎಂಟು ಮೈಲು ದೂರದಲ್ಲಿ ಶ್ರೀರಂಗ ಕ್ಷೇತ್ರವಿದೆ. ಕಾವೇರಿ ನದಿಯಿಂದ ಸುತ್ತುವರಿದ ಈ ಊರು ನಡುಗಡ್ಡೆಯಂತಿದೆ. ಊರಲ್ಲಿ ಶ್ರೀರಂಗನ ದೊಡ್ಡ ದೇವಾಲಯವಿದೆ. ಇದಕ್ಕೆ ಅಂತರಂಗವೆಂದೂ ಹೆಸರಿದೆ. ಭಾರತದಲ್ಲಿ ಅತಿ ವಿಸ್ತಾರವಾದ ಮಂದಿರವೆಂದು ಇದು ಹೆಸರಾಗಿದೆ.

### ೬೭. ಶ್ರೀವಾದಿರಾಜರು

ಸೋದೆಮಠದ ಶ್ರೀ ವಿಷ್ಣುತೀರ್ಥರ ಪರಂಪರೆಯಲ್ಲಿ ಬಂದ ಯತಿಗಳಿವರು. ಶ್ರೀ ವ್ಯಾಸರಾಯರಲ್ಲಿ ವಿದ್ಯಾಭ್ಯಾಸ ಮಾಡಿ ಪಂಡಿತರಾದವರು. ತಮ್ಮ ಕಾಲದ ಶೃಂಗೇರಿಮಠದ ಯತಿಗಳನ್ನು ಜಪಿಸಿದ ಇವರು ರಚಿಸಿದ ಗ್ರಂಥಗಳು ಸಂಸ್ಕೃತದಲ್ಲಿ ಪ್ರಸಿದ್ಧಿಯಾಗಿವೆ. ತತ್ವಪ್ರಕಾಶಿಕಾ, ಭಗವದ್ಗೀತೆಗಳ ಟಿಪ್ಪಣಿಗಳು ಹೆಸರು ಪಡೆದಿವೆ.

### ೬೮. ಸಾಧಿಸಿ ಸುಷುಮ್ನಾ

ದೇಹದಲ್ಲಿರುವ ಇಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಹೃದಯಕ್ಕೆ ಹೊಂದಿಕೊಂಡಂತೆ ನೂರೊಂದು ನಾಡಿಗಳು ಮುಖ್ಯವಾದವು. ಅವುಗಳಲ್ಲಿ ಬಲಗಡೆ 'ಇಡಾ' ಎಡಗಡೆ ಇರುವ 'ಪಿಂಗಳಾ' ನಡುವೆ ಇರುವ 'ಸುಷುಮ್ನ' ಇವು ಪ್ರಧಾನವಾದವು. ಇವುಗಳಲ್ಲಿ ಸುಷುಮ್ನ ಎಂಬುವುದೇ ಕುಂಡಲೀ ಮಾರ್ಗ.

## ೬೯. ಸಂಚಿತ ಅಗಾಮಿ ಪ್ರಾರಬ್ಧಗಳು

ಮೂರು ಬಗೆಯ ಕರ್ಮಗಳು, ಹಿಂದಣ, ಜನ್ಮಗಳಂಥ ಕೂಡಿ ಹಾಕಿಕೊಂಡು ಬಂದಿರುವ ಕರ್ಮಗಳು ಸಂಚಿತ ಮುಂದೆ ಫಲವನ್ನು ಕೊಡುತ್ತಿರುವವು ಅಗಾಮಿ. ಈ ದೇಹಕ್ಕೆ ಈ ಸ್ಥಿತಿಗೆ ಕಾರಣವಾಗಿ ಫಲವನ್ನು ಕೊಡಲು ಆಗಲೇ ತೊಡಗಿರುವವು ಪ್ರಾರಬ್ಧಗಳು.

## ೭೦. ಸಾಂದೀಪನ

ಕೌಶ್ಯಕುಲದ ಬ್ರಾಹ್ಮಣ, ಅವಂತಿಯಲ್ಲಿ ವಾಸವಾಗಿದ್ದ ಬಲರಾಮ – ಕೃಷ್ಣ – ಸುಧಾಮರ ಗುರು. ವಿದ್ಯೆ ಕಲಿತಾದ ಬಳಿಕ ಗುರುದಕ್ಷಿಣೆಯನ್ನೇನು ಕೊಡಬೇಕೆಂದು ಕೇಳಿದಾಗ ತೀರಿದ ತನ್ನ ಮಗನನ್ನು ತರಬೇಕೆಂದು ಕೃಷ್ಣನಿಗೆ ಹೇಳಿದ. ಆಗ ಕೃಷ್ಣನು ಸಮುದ್ರ ಪ್ರವೇಶಿಸಿ ಗುರುಪುತ್ರನನ್ನು ಕದ್ದ, ಪಂಚಜನನೆಂಬ ರಾಕ್ಷಸನನ್ನು ಕೊಂದು ಸಾಂದೀಪನ ಮಗನನ್ನು ತಂದು ಒಪ್ಪಿಸಿದ ಕತೆ ಭಾಗವತದಲ್ಲಿದೆ.

## ೭೧. ಸ್ವಾಮಿತೀರ್ಥ

ತಿರುಪತಿ ವೆಂಕಟರಮಣನ ಗುಡಿಯ ಬಳಿಯಲ್ಲಿಯೇ ಎಡಕ್ಕೆ ಸ್ವಾಮಿ ಪುಷ್ಕರಣಿ ಎಂಬ ಸರೋವರವಿದೆ. ಮಹಾವತಾರದಲ್ಲಿ ಶ್ರೀ ವರಾಹದೇವರ ಆಜ್ಞೆಯಂತೆ ಗರುಡನು ಈ ಪುಷ್ಕರಣಿಯನ್ನು ವರಹದೇವರ ಸ್ನಾನಕ್ಕಾಗಿ ವೈಕುಂಠದಿಂದ ತಂದನೆಂದು ಪ್ರತೀತಿ ಇದೆ.

## ೭೨. ಸೌಗಂಧಿಕ

ತುಂಬಾ ಸುವಾಸನೆಯುಳ್ಳ ಈ ಹೂವನ್ನು ದ್ರೌಪದಿ ಬಯಸಿದಾಗ ಭೀಮನು ಅದನ್ನು ಗಂಧಮಾಧವನ ಪರ್ವತದಿಂದ ತಂದುಕೊಟ್ಟ ಕಥೆಯಿದೆ.

## ೭೩.ಹರಿಮುದ್ರೆ

ವೈಷ್ಣವರು ವಿಷ್ಣುವಿನ ಹೆಸರಿನಿಂದ ಧರಿಸುವ ಪಂಚಮುದ್ರೆಗಳು ಶಂಖ, ಚಕ್ರ, ಗದೆ, ಎಂಬ ನಾಲ್ಕು ಆಯುಧಗಳು ಇದರಲ್ಲಿ ಸೇರುತ್ತವೆ. ಐದನೇಯ ನಾರಾಯಣ ಮಂತ್ರ.

## ೭೪. ಹಿಡಿಂಬಿಕ

ಈತ ಕಿಮ್ಮಿರನ ಒಡಹುಟ್ಟಿದವ. ಪಾಂಡವರು ಅರಗಿನ ಮನೆಯಿಂದ ಹೊರಬಿದ್ದು, ಅರಣ್ಯ ಸೇರಿದಾಗ ಭೀಮನನ್ನು ಕೆಣಕಿ ಆತನಿಂದ ಮರಣ ಹೊಂದಿದನು.

## ೭೫. ಹಂಸ

ಪರೋಪಾಸನೆಯಲ್ಲಿ ಶ್ವಾಸದ ಬಹಿರ್ಗಮನವನ್ನು 'ಹಂ' ಎಂದೂ ಶ್ವಾಸದ ಅಂತರ್ಗಮನವನ್ನು 'ಸಃ' ಎಂದೂ ಉಚ್ಚಾರಣೆಯಿಂದ ನಿರ್ದೇಶಿಸುತ್ತಾರೆ. ಹೀಗೆ ಜೀವನು ಹಂಸರೂಪಿಣಿಯಾದ ಅಜಪಾಗಯತ್ರಿನ್ನು ಎಡಬಿಡದೆ ಜಪಿಸುತ್ತಿರುವುದರಿಂದ ಜೀವನಿಗೇ 'ಹಂಸ' ವೆಂದು ಹೆಸರು.

# ಅನುಬಂಧ – ೪

## ಕೀರ್ತನೆಗಳ ಅಕಾರಾದಿ

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಕೀರ್ತನೆ ಸಂಖ್ಯೆ |
|---|---|---|
| ೧೪೫. | ತಾರಮ್ಮಯ್ಯ ಯದುಕುಲ | ೧೦೧ |
| ೧೪೬. | ತಾರಿಸೋ ಶ್ರೀ ಹರಿ | ೨೭೬ |
| ೧೪೭. | ತಾಳ ಬೇಕು ತಕ್ಕ ಮೇಳಬೇಕು | ೧೪ |
| ೧೪೮. | ತಾಳು ತಾಳೆಲೊ ರಂಗಯ್ಯ – ನೀ | ೧೦೨ |
| ೧೪೯. | ತುಂಗೆ ಮಂಗಳ ತರಂಗೆ ಹರಿ ಸರ್ವಾಂಗೇ | ೨೧೨ |
| ೧೫೦. | ತುಂಟನಿವನು ಕಾಣಮ್ಮ ಗೋಪಾಲನು | ೧೦೩ |
| ೧೫೧. | ತ್ರುಟಿಕೆ ಕ್ಷಣಕೆ ನೆನೆ ಮನವೆ – ಹರಿಯ | ೩೭ |
| ೧೫೨. | ತೇಲಿಸೊ ಇಲ್ಲ ಮುಳುಗಿಸೊ | ೨೭೭ |
| ೧೫೩. | ತೋಳೂ ತೋಳು ತೋಳು ಕೃಷ್ಣ ತೋಳನ್ನಾಡೈ | ೧೦೪ |
| ೧೫೪. | ದಣಿಯ ನೋಡಿದೆನೋ ವೆಂಕಟನ | ೨೭೮ |
| ೧೫೫. | ದಯ ಮಾಡೋ ದಯ ಮಾಡೋ | ೨೭೯ |
| ೧೫೬. | ದಯೆ ಮಾಡಿಸಲಹಯ್ಯ ಭಯನಿವಾರಣನೆ | ೨೮೦ |
| ೧೫೭. | ದಾತ ಹರಿಯು ದಯಮಾಡುವನಿರಲು | ೧೫ |
| ೧೫೮. | ದಾರಿ ಏನಿದಕೆ ಮುರಾರಿ | ೨೮೧ |
| ೧೫೯. | ದಾರಿಯ ತೋರೊ ಮುಕುಂದ ಹರಿ | ೨೮೨ |
| ೧೬೦. | ದಾರಿ ಯಾವುದಯ್ಯ ವೈಕುಂಠಕೆ | ೨೮೩ |
| ೧೬೧. | ಧಾನ್ಯ ದೊರಕಿತು ಎನಗೆ | ೨೮೭ |
| ೧೬೨. | ದಾಸನ ಮಾಡಿಕೊ ಎನ್ನ ಇಷ್ಟು | ೨೮೫ |
| ೧೬೩. | ದಾಸನ ಮಾಡಿಕೊ ಎನ್ನ ದಿವ್ಯ | ೨೮೬ |
| ೧೬೪. | ದಾಸ ಶೇಷಾದ್ರಿಯ ವಾಸ ತಿಮ್ಮಪ್ಪನ | ೨೮೪ |
| ೧೬೫. | ದೂರ ಮಾಡುವರೇನೆ ರಂಗಯ್ಯನ | ೧೦೫ |
| ೧೬೬. | ದೇವ ಬಂದ ನಮ್ಮ ಸ್ವಾಮಿ | ೨೮೮ |
| ೧೬೭. | ನಂಬಿದೆ ನಿನ್ನ ಪಾದವ | ೨೮೯ |
| ೧೬೮. | ನಡೆದು ಬಾ ನಲ್ವರಿದ್ದೆಡೆಗೆ ಎನ್ನಯ ನಿನ್ನ | ೧೬ |
| ೧೬೯. | ನಮ್ಮಪ್ಪ ಸುಮ್ಮನಿರೋ ಗೋಪಾಲ | ೧೦೬ |
| ೧೭೦. | ನಲಿದಾಡೆ ಎನ್ನ ನಾಲಿಗೆ ಮೇಲೆ ಸರಸ್ವತಿದೇವಿ | ೨೦೧ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಕೀರ್ತನೆ ಸಂಖ್ಯೆ |
|---|---|---|
| ೧೯೬. | ನೀ ಕೊಡೆ ನಾಬಿಡೆ ಕೇಳಯ್ಯ – ಹರಿ | ೧೧೨ |
| ೧೯೭. | ನೀನಲ್ಲದೆ ನನಗಾರಿಲ್ಲ ಗೋವಿಂದ | ೩೦೩ |
| ೧೯೮. | ನೀನಾರವ ಪೇಳೆನ್ನ ಕಣ್ಣ ಮುಚ್ಚುವೆ | ೧೧೩ |
| ೧೯೯. | ನೀನೆ ಅನಾಥ ಬಂದು ಕಾರುಣ್ಯ ಸಿಂಧು | ೩೦೪ |
| ೨೦೦. | ನೀನೆ ಅಚ್ಚುತ ನೀನೇ ಮಾಧವ | ೧೧೪ |
| ೨೦೧. | ನೀನೆ ಗತಿ ನೀನೆ ಮತಿ | ೩೦೫ |
| ೨೦೨. | ನೀನೆ ದಯಾ ಸಂಪನ್ನನೊ | ೩೦೭ |
| ೨೦೩. | ನೀನೆ ದಯಾಳೂ ನಿರ್ಮಲಚಿತ್ತ ಗೋವಿಂದ | ೩೦೬ |
| ೨೦೪. | ನೀನೆ ಬಲ್ಲಿದನೊ ಹರಿ ನಿನ್ನ | ೪೧ |
| ೨೦೫. | ನೆನೆಯಿರೊ ಭಕುತ ಜನರು – ಅನುದಿನವು | ೧೭೭ |
| ೨೦೬. | ನೆನವೆನು ಅನುದಿನ ನಿಮ್ಮ ಮಹಿಮೆ – ಮಧ್ವರಾಯ | ೧೭೮ |
| ೨೦೭. | ನೋಡುವ ಬನ್ನಿರಯ್ಯ | ೨೧೩ |
| ೨೦೮. | ನೋಡುವುದೇ ಕಣ್ಣು ಕೇಳುವುದೆ ಕಿವಿ | ೧೧೫ |
| ೨೦೯. | ನೋಡೆ ಗೋಪಿ ಗೋಕುಲದೊಳು ಹರಿ | ೧೧೬ |
| ೨೧೦. | ನೋಡೆಯಮ್ಮ ನಾ ಮಾಡಿದ ತಪ್ಪಿಲ್ಲ | ೧೧೭ |
| ೨೧೧. | ಪರಮ ಪದವೀವ ಗುರು | ೧೭೯ |
| ೨೧೨. | ಪರಾಕು ಮಾಡದೆ ಪರಾಮರಿಸಿ | ೩೦೮ |
| ೨೧೩. | ಪಾಲಿಸೆಮ್ಮ ಮುದ್ದು ಶಾರದೆ ಎನ್ನ ನಾಲಗೆಯು ನಿಲ್ಲಬಾರದೆ | ೨೦೨ |
| ೨೧೪. | ಪಾವನನವ ಪಾವನನವ ಪಾವನನವ ಜಗಕೆ | ೨೦ |
| ೨೧೫. | ಪುಟ್ಟಿಸಬೇಡವೊ ದೇವ ಎಂದಿಗೂ | ೩೦೯ |
| ೨೧೬. | ಪೂರ್ವಜನ್ಮದಲಿ ನಾಮಾಡಿದಾ ಭವದಿಂದ | ೩೧೦ |
| ೨೧೭. | ಪೇಳಲಳವೆ ನಿನ್ನ ಮಹಿಮೆಯ ಶ್ರೀರಂಗಧಾಮ | ೧೧೮ |
| ೨೧೮. | ಪೋಗದಿರಲೋ ರಂಗ – ಬಾಗಿಲಿಂದಾಚೆಗೆ | ೧೧೯ |
| ೨೧೯. | ಬಗೆ ಬಗೆ ಆಟಗಳೆಲ್ಲ ಕಲಿತೆಯೋ | ೧೨೦ |
| ೨೨೦. | ಬಣ್ಣಿಸಿ ಗೋಪಿ ತಾ ಹರಿಸಿದಳು | ೧೨೧ |

# ಅನುಬಂಧ - ೫

## ಸಹಾಯಕ ಸಾಹಿತ್ಯ

### ಸಂಪಾದಿತ ಕೃತಿಗಳು

| ಕ್ರ. ಸಂಖ್ಯೆ | ಸಂಪಾದಕರ ಹೆಸರು | ಕೃತಿಯ ಹೆಸರು | ಪ್ರಕಾಶನದ ಹೆಸರು ಮತ್ತು ಪ್ರಕಟಿತ ವರ್ಷ |
|---|---|---|---|
| ೧. | ಪಾವಂಜೆ ಗುರುರಾಯ | ಪುರಂದರದಾಸರ ಕೀರ್ತನೆಗಳು | ಶ್ರೀ ಮನ್ಮಧ್ವಸಿದ್ಧಾಂತ ಗ್ರಂಥಾಲಯ ಉಡುಪಿ ೧೯೧೨ |
| ೨ | ಸುಬೋಧ ರಾಮರಾಯ | 'ಹರಿದಾಸ ಕೀರ್ತನ ತರಂಗಿಣಿ' | ಹರಿದಾಸ ಕೀರ್ತನ ತರಂಗಿಣಿ ಗ್ರಂಥಮಾಲೆ, |
| ೩. | ಗೊರೆಬಾಳ ಹನುಮಂತರಾಯ | "ಹರಿದಾಸರ ಕೀರ್ತನೆಗಳು" | ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ, ಲಿಂಗಸೂರು ೧೯೪೪ |
| ೪ | ಬೆಟಗೇರಿ ಕೃಷ್ಣಶರ್ಮ ಬೆಂಗೇರಿ ಹುಚ್ಚರಾಯ | ಪೂಜಾತತ್ವ | ಮಿಂಚಿನಬಳ್ಳಿ ಕಾರ್ಯಾಲಯ ಧಾರವಾಡ, ೧೯೬೩ |
| ೫ | ಬೆಟಗೇರಿ ಕೃಷ್ಣಶರ್ಮ ಬೆಂಗೇರಿ ಹುಚ್ಚರಾಯ | ಆರ್ತಭಾವ | ಮಿಂಚಿನಬಳ್ಳಿ ಕಾರ್ಯಾಲಯ ಧಾರವಾಡ, ೧೯೬೪ |
| ೬ | ಬೆಟಗೇರಿ ಕೃಷ್ಣಶರ್ಮ ಬೆಂಗೇರಿ ಹುಚ್ಚರಾಯ | ಮಹಾತ್ಮ್ಯಜ್ಞಾನ | ಮಿಂಚಿನಬಳ್ಳಿ ಕಾರ್ಯಾಲಯ ಧಾರವಾಡ, ೧೯೬೪ |
| ೭ | ಬೆಟಗೇರಿ ಕೃಷ್ಣಶರ್ಮ ಬೆಂಗೇರಿ ಹುಚ್ಚರಾಯ | ಕೃಷ್ಣಲೀಲೆ | ಮಿಂಚಿನಬಳ್ಳಿ ಕಾರ್ಯಾಲಯ ಧಾರವಾಡ, ೧೯೬೫ |
| ೮ | ಬೆಟಗೇರಿ ಕೃಷ್ಣಶರ್ಮ ಬೆಂಗೇರಿ ಹುಚ್ಚರಾಯ | ಲೋಕನೀತಿ | ಮಿಂಚಿನಬಳ್ಳಿ ಕಾರ್ಯಾಲಯ ಧಾರವಾಡ, ೧೯೬೫ |
| ೯ | ಬೆಟಗೇರಿ ಕೃಷ್ಣಶರ್ಮ ಬೆಂಗೇರಿ ಹುಚ್ಚರಾಯ | ಸಂಕೀರ್ಣಸಂಗ್ರಹ | ಮಿಂಚಿನಬಳ್ಳಿ ಕಾರ್ಯಾಲಯ ಧಾರವಾಡ, ೧೯೬೬ |
| ೧೦ | ಪ್ರೊ.ಸಾ.ಕೃ.ರಾಮಚಂದ್ರ ರಾವ್ | ಜೀವನ ದರ್ಶನ | ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು ೧೯೮೫ |
| ೧೧ | ಪ್ರೊ.ಸಾ.ಕೃ.ರಾಮಚಂದ್ರ ರಾವ್ | ಆಧ್ಯಾತ್ಮ ದರ್ಶನ | ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು ೧೯೮೫ |

| ಕ್ರ. ಸಂಖ್ಯೆ | ಸಂಪಾದಕರ ಹೆಸರು | ಕೃತಿಯ ಹೆಸರು | ಪ್ರಕಾಶನದ ಹೆಸರು ಮತ್ತು ಪ್ರಕಟಿತ ವರ್ಷ |
|---|---|---|---|
| ೧೨ | ಪ್ರೊ.ಸಾ.ಕೃ.ರಾಮಚಂದ್ರ ರಾವ್ | ಸಮಾಜದರ್ಶನ | ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು ೧೯೮೫ |
| ೧೩ | ಪ್ರೊ.ಸಾ.ಕೃ.ರಾಮಚಂದ್ರ ರಾವ್ | ಕೀರ್ತನ ದರ್ಶನ | ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು ೧೯೮೫ |
| ೧೪ | ಡಾ. ಬಸವರಾಜ ಸಬರದ | ಪುರಂದರ ದಾಸರ ಆಯ್ದ ಕೀರ್ತನೆಗಳು | ಬಂಜಾರಾಪ್ರಕಾಶನ, ಗುಲಬರ್ಗಾ ೨೦೦೨ |

## ಸಂಶೋಧನಾ ಕೃತಿಗಳು

| ಕ್ರ. ಸಂಖ್ಯೆ | ಲೇಖಕರ ಹೆಸರು | ಕೃತಿಯ ಹೆಸರು | ಪ್ರಕಾಶನದ ಹೆಸರು ಮತ್ತು ಪ್ರಕಟಿತ ವರ್ಷ |
|---|---|---|---|
| ೧ | ಆರ್.ಎಸ್. ಪಂಚಮುಖಿ | ಹರಿದಾಸ ಸಾಹಿತ್ಯ | ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೫೨ |
| ೨ | ಆರ್.ಎಸ್. ಪಂಚಮುಖಿ | ಪುರಂದರ ದಾಸರ ಜೀವನ ಚರಿತ್ರೆ | ಶ್ರೀ ಪುರಂದರದಾಸ ಸೇವಾಮಂಡಲ, ಹೊಸಪೇಟೆ ೧೯೫೬ |
| ೩ | ಬುರ್ಲಿಬಿಂಧು ಮಾಧವ (ಸಂ) | ಶ್ರೀ ಪುರಂದರ ದಾಸರು | ಮಿಂಚಿನ ಬಳ್ಳಿ ಕಾರ್ಯಾಲಯ, ಧಾರವಾಡ, ೧೯೬೪ |
| ೪ | ಡಾ.ವ.ಅ.ದಿವಾಣಜಿ | ಪ್ರಸಾದಯೋಗ | ಉಷಾಸಾಹಿತ್ಯ ಮಾಲೆ ಮೈಸೂರು, ೧೯೭೨ |
| ೫ | ಜಿ.ವರದರಾಜ ರಾವ್ | ಹರಿದಾಸ ಸಾಹಿತ್ಯ ಸಮೀಕ್ಷೆ | ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ ೧೯೭೩ |
| ೬ | ಆರ್.ಎಸ್. ಪಂಚಮುಖಿ, ಎಸ್.ಕೆ. ರಾಮಚಂದ್ರರಾವ್ &ತ.ಸು. ಶ್ಯಾಮರಾವ್ | ಪುರಂದರದಾಸರ ಸಾಹಿತ್ಯ ಸಮೀಕ್ಷೆ | ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೭೭ |
| ೭ | ವೀ.ಸೀತಾರಾಮಯ್ಯ | ಶ್ರೀ ಪುರಂದರ ದಾಸರು | ನ್ಯಾಷನಲ್ ಬುಕ್ ಟ್ರಸ್ಟ್, ನವದೆಹಲಿ, ೧೯೭೯ |
| ೮ | ಡಾ. ಬಸವರಾಜ ಸಬರದ | ಬಸವೇಶ್ವರ ಮತ್ತು ಪುರಂದರದಾಸ | ತರಳಬಾಳು ಪ್ರಕಾಶನ, ಸಿರಿಗೆರೆ, ೧೯೯೨ |

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು